# ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಶಾಸನಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
**ಗುಂಡಮ್ಮ**

ಮಾರ್ಗದರ್ಶಕರು
**ಡಾ. ಎಂ. ಕೊಟ್ರೇಶ್**
ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ



ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೯

# ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಶಾಸನಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಗುಂಡಮ್ಮ



ಮಾರ್ಗದರ್ಶಕರು
ಡಾ. ಎಂ. ಕೊಟ್ರೇಶ್
ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ





ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೯

# ಮಾರ್ಗದರ್ಶಕರ ಪ್ರಮಾಣ ಪತ್ರ

**ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಗುಂಡಮ್ಮ** ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಎಂ. ಕೊಟ್ರೇಶ್

**ಡಾ. ಎಂ. ಕೊಟ್ರೇಶ್**
ಅಧ್ಯಾಪಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 08-10-2009

# ಪ್ರಮಾಣ ಪತ್ರ

**ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧವನ್ನು **ಡಾ.ಎಂ. ಕೊಟ್ರೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾದ ವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Gundamma

**ಗುಂಡಮ್ಮ**
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 08.10.2009

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಎಂ.ಫಿಲ್ ಪದವಿಗೆ ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಎ.ಮುರಿಗೆಪ್ಪ, ಕುಲಸಚಿವಾರದ ಶ್ರೀ ಎಸ್.ಎಸ್.ಪೂಜಾರ ಹಾಗೂ ಅಧ್ಯಯನಾಂಗ ನಿರ್ದೇಶಕರಾದ ಡಾ.ವ್ಹಿ.ಎಸ್.ಬಡಿಗೇರ ಅವರಿಗೆ,

ಈ ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ನನ್ನನ್ನು ಪ್ರೊತ್ಸಾಹಿಸಿ ಸೂಕ್ತ ಸಲಹೆ ಮಾರ್ಗದರ್ಶನ ಮತ್ತು ಪೇರೆಣೆಯನ್ನು ನೀಡಿದ ನನ್ನ ಗುರುಗಳು ಹಾಗೂ ಮಾರ್ಗದರ್ಶಕರೂ ಆದ ಡಾ.ಎಂ.ಕೊಟ್ರೇಶ್‌ರವರಿಗೆ ಶಾಸನಶಾಸ್ತ್ರದ ಮುಖ್ಯಸ್ಥರು ಹಾಗೂ ನಾನು ಅಧ್ಯಯನ ಮಾಡುವ ಸಂದರ್ಭದಲ್ಲಿ ವಿಷಯದ ಕುಂದು ಕೊರತೆಗಳನ್ನು ಸೂಚಿಸಿ ಸೂಕ್ತ ಸಲಹೆ ನೀಡದ ಗುರುಗಳಾದ ಡಾ.ಡಿ.ವಿ.ಪರಮಶಿವಮೂರ್ತಿ, ಡಾ.ದೇವರಕೊಂಡರೆಡ್ಡಿ, ಡಾ.ಕೆ.ಜಿ.ಭಟ್‌ಸೂರಿ, ಡಾ.ಕಲವೀರಮನ್ವಚಾರ್ ಹಾಗೂ ಆಡಳಿತ ಸಿಬ್ಬಂದಿಗಳಿಗೆ,

ನನ್ನ ಅಧ್ಯಯನಕ್ಕೆ ಪ್ರೋತ್ಸಾಹವನ್ನಿತ್ತ ನನ್ನ ಪೂಜ್ಯ ತಂದೆಯವರಾದ ಅಯ್ಯಣ್ಣ, ತಾಯಿ ನೀಲಮ್ಮ, ಅಣ್ಣ ಸಗರಪ್ಪ(ಕೆನರಾ ಬ್ಯಾಂಕ್, ರಾಯಚೂರು) ಮತ್ತೊಬ್ಬ ಸಹೋದರ ಬಸವರಾಜ, ಪಂಪಾಪತಿ, ಅಕ್ಕಂದಿರಾದ ಅಮರಮ, ರುದ್ರಮ್ಮ, ದೇವಮ್ಮ, ತಂಗಿಯ ಗಂಡನಾದ ಬಸವರಾಜ ಮಾನ್ವಿ ಮತ್ತು ಕುಟುಂಬ ವರ್ಗದವರಿಗೂ.

ಕಾಡಾ ಅಧ್ಯಕ್ಷರಾದ ಬ್ಯಾಗವಾಟ ಬಸವನಗೌಡ (ಟಿ.ಬಿ.ಡ್ಯಾಂ, ಹೊಸಪೇಟೆ) ಮತ್ತು ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜ್, ಬ್ಯಾಗವಾಟನ ಪ್ರಾಚಾರ್ಯರು, ಅಧ್ಯಾಪಕರು, ಉಪನ್ಯಾಸಕರು, ಹಾಗೂ ಊರಿನ ಗಣ್ಯರಾದ ಡಾ.ನಾಗರಾಜ ಕಿಡಗಣಯ್ಯ ಸ್ವಾಮಿ ಉಮಳಹೊಸರು ಅವರಿಗೆ.

ಸ್ನೇಹಿತರಾದ ಪ್ರಭಾವತಿ, ವಿಪ್ಲವಿ, ರುಬಿನಾ, ರಾಜೇಶ್ವರಿ, ಲಕ್ಷ್ಮಿ, ಅಂಬಿಕಾ, ವೀಣಾ ಎಸ್. ಮುದ್ದೇಬಿಹಾಳ, ಶುಶೀಲಾ ಇನ್ನೂ ಮುಂತಾದವರಿಗೆ.

ಸಂಶೋಧನೆಗೆ ಪೂರಕವಾದ ಪುಸ್ತಕಗಳನ್ನು ಒದಗಿಸಿದ ಗ್ರಂಥಾಲಯದ ಗ್ರಂಥಪಾಲಕರುಗಳಾದ ಡಾ.ಕೆ.ರಾಧಕೃಷ್ಣ, ಶ್ರೀಮತಿ ಎಚ್.ನಾಗವೇಣಿ ಹಾಗೂ ಸಿಬ್ಬಂದಿ ವರ್ಗದವರಿಗೆ.

ನನ್ನ ಸಂಪ್ರಬಂಧವನ್ನು ಅಂದವಾಗಿ ಅಕ್ಷರ ಸಂಯೋಜಿಸಿದ ಶ್ರೀ ಕುಮಾರ ಬಡಿಗೇರ ಹಾಗೂ ಡಾ.ಗವಿಸಿದ್ದಪ್ಪ ಹಂದ್ರಾಳ, ಮಯ ಪ್ರಕಾಶನ ಕಮಲಾಪುರ ಅವರಿಗೆ.

ಕೃತಜ್ಞತೆಗಳು

ಗುಂಡಮ್ಮ

# ಪರಿವಿಡಿ

## ಪ್ರಸ್ತಾವನೆ

ಪ್ರಕೃತಿಯಲ್ಲಿ ರಹಸ್ಯವನ್ನು ಬೇಧಿಸಿದಷ್ಟು ಆಳವಾಗಿರುತ್ತದೆ. ಅಂತ್ಯ ಎನ್ನುವುದೇ ಇಲ್ಲ. ಅದಕ್ಕೆ ಕಾರಣಗಳು ಅನೇಕ ಹಾಗೆ ಮಾನವನ ಹುಟ್ಟು ಸಾವಿನ ಬಗ್ಗೆ ಹೆಕ್ಕಿದಷ್ಟು ಕುತುಹಲಕರ ಸಂಗತಿಗಳು ತಿಳಿದು ಬರುತ್ತವೆ. ಡಾರ್ವಿನ್ನನ ಜೀವ ವಿಕಾಸವಾದ ಸಿದ್ಧಾಂತದಿಂದ ತಿಳಿದು ಬರುವ ವಿಷಯ ಮಂಗನಿಂದ ಮಾನವ. ಈ ಮೊದಲೆಲ್ಲ ಅಲೆಮಾರಿ ಜೀವನ ಸಾಗಿಸುತ್ತಿದ್ದ, ಕಾಲ ಗತಿಸಿದಂತೆಲ್ಲ ಒಂದಲ್ಲ ಒಂದು ರೀತಿಯಲ್ಲಿ ತನಗೆ ಬೇಕಾದ ಅವಶ್ಯಕತೆಗಳನ್ನು ಹಂತ ಹಂತವಾಗಿ ಪಡೆಯುತ್ತಾ ಸಾಗಿದ. ಉದಾ:ಗಡ್ಡೆ ಗೆಣಸುಗಳ ಜೊತೆಗೆ ಬೇಟೆಯಿಂದ ತನ್ನ ಆಹಾರವನ್ನು ಪಡೆದುಕೊಳ್ಳುತ್ತಿದ್ದನು. ಆಕಸ್ಮಿಕವಾಗಿ ಬೆಂಕಿಯನ್ನು ಕಂಡುಕೊಂಡು. ಮಳೆ, ಚಳಿಯಿಂದ ರಕ್ಷಿಸಿಕೊಳ್ಳಲಿಕ್ಕೆ ಚರ್ಮ. ತೊಗಟೆಗಳನ್ನು ಬಳಸಿಕೊಂಡನು. ವಾಸಿಸಲು ಗುಹೆ, ಪೊಟರೆಗಳನ್ನು ಆಶ್ರಯಿಸಿದ ಒಂದು ಕಡೆ ನೆಲೆಸಲು ಪ್ರಾರಂಭಿಸಿದನು. ಗುಂಪನ್ನು ಕಟ್ಟಿಕೊಂಡು ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಸತ್ಯವನ್ನು ಅರಿತುಕೊಂಡು ಜೀವನ ಸಾಗಿಸಿದನು.

ನಾಗರಿಕತೆ ಹೊಂದಿದ ಮಾನವ ತನ್ನ ಅನುಭವಗಳನ್ನು, ವಿಚಾರಗಳನ್ನು ದೃಶ್ಯ ಮಾಧ್ಯಮದಲ್ಲಿ ತೋರಿಸಲು ಪ್ರಯತ್ನ. ನಡೆಸಿದ ತನ್ನ ಜನರಿಗೆ ಮತ್ತು ಭವಿಷತ್ ಕಾಲದ ಜನರಿಗೆ ತನ್ನ ಅನುಭವಗಳನ್ನು ತಿಳಿಸಲು ದೃಶ್ಯ ಮಾಧ್ಯಮ ಅವಶ್ಯಕವಾಗಿತ್ತು. ಈ ಕಾರಣಕ್ಕಾಗಿ ಮಾನವನು ಶೋಧಿಸಿದ ದೃಶ್ಯ ಮಾಧ್ಯಮವನ್ನು ನಾವು ಬರವಣಿಗೆ ಎಂದು ಕರೆಯುತ್ತೇವೆ. ಈ ಬರವಣಿಗೆ ಮಾನವನನ್ನು ಅನಾಗರೀಕತೆಯಿಂದ ನಾಗರೀಕತೆಯೆಡೆಗೆ ಕೊಂಡುಯುತ್ತದೆ. ಅಲ್ಲದೆ ಮಾನವ ಭೂಮಿಯ ಮೇಲಿನ ತನ್ನ ಅವಶ್ಯಕತೆಯ ಕುರಿತು ಹಾಗೂ ಅಸ್ತಿತ್ವದ ಕುರಿತು ವಿಚಾರಗಳನ್ನು ತಿಳಿಯಪಡಿಸಲು ಸಹಾಯಕವಾಗಿದೆ. ಅಲ್ಲದೆ ಬೃಹತ್ ಸಂಸ್ಕೃತಿ ಸಿದ್ಧಾಂತಗಳು ವಿವಿಧ ಧರ್ಮ-ಜನಾಂಗ ಎಲ್ಲಾ ಸಾಮ್ರಾಜ್ಯ ಸಂಸ್ಥಾಪಕರನ್ನು ಇದು ಪರಿಚಯಿಸುತ್ತದೆ.

ಹೀಗೆ ಆದಿ ಮಾನವ ಅಲೆಮಾರಿ ಮಾನವನಾಗಿ ಸ್ಥಿರವಾಗಿ ನಿಂತು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಾ ಸಾಗಿ ಬಂದ ದಾರಿಯನ್ನು ಗಮನಿಸಿದಾಗ ಮಾನವ ಏನೆಲ್ಲ ಬದಲಾವಣೆಗಳನ್ನು ರೂಢಿಸಿಕೊಳತ್ತಾ ತನ್ನ ಸಂಸ್ಕೃತಿಯನ್ನು ಉಳಿಸಿ ಬೆಳಸಿಕೊಂಡು ಬೇಧಿಸುವ ಮಟ್ಟಿಗೆ ತನ್ನನ್ನು ತಾನು ಸೃಷ್ಟಿಮಾಡಿಕೊಳ್ಳುವವರೆಗೆ ಬೆಳೆದದ್ದನ್ನು ಗಮನಿಸಿದರೆ ಆಶ್ಚರ್ಯ ಜೊತೆಗೆ ಭಯನೂ ಉಂಟುಮಾಡುತ್ತದೆ. ಒಂದು ರೀತಿ ರೋಚಕ ಪತ್ತೆದಾರಿ ಕಾದಂಬರಿಯೋ ಅಥವಾ ಧಾರವಾಹಿ ರೀತಿಯಲ್ಲಿ ಕೇಳಿದಷ್ಟು ಕೇಳಬೇಕೆನಿಸುತ್ತದೆ. ನೋಡಿದಷ್ಟು ಕಡಿಮೆ ಎನಿಸುತ್ತದೆ.

ಒಟ್ಟಿನಲ್ಲಿ ಅದೇನೆ ಇರಲಿ ಮನುಷ್ಯ ತಾನು ಬದುಕಿ ಇತರರಿಗೂ ಬದುಕಲು ಅವಕಾಶಕೊಟ್ಟು ತನ್ನ ಕಾಲದ ಜನರ ಬದುಕಿನ ವಿಚಾರಗಳನ್ನು ತಿಳಿಸಲು ಮಾನವ ಕ್ರಿ.ಪೂ.೩ನೇ ಶತಮಾನದಲ್ಲಿ ಬರವಣಿಗೆಯನ್ನು ಬಂಡೆಗಳ ಮೇಲೆ, ತಾಮ್ರ, ಕಂಚು, ಹಿತ್ತಾಳೆ, ಬೆಳ್ಳಿ, ಕಬ್ಬಿಣ ಮುಂತಾದ ಲೋಹಗಳ ಮೇಲೆ ತನ್ನ ಕಾಲದ ಜನರ ಬದುಕಿನ ರೀತಿ–ನೀತಿಗಳನ್ನು ಮುಂದಿನ ಜನಾಂಗಕ್ಕೆ ಬುನಾದಿ ಹಾಕಿಕೊಡಲು ಕೆಲವೊಂದು ಮೂಲಾಧಾರಗಳನ್ನು ಅಥವಾ ಕುರುಹುಗಳನ್ನು ಬಿಟ್ಟುಕೊಟ್ಟು ಹೋಗಿದ್ದಾನೆ. ಅಂತಹ ಕುರುಹುಗಳಲ್ಲಿ ದೇವಾಲಯಗಳು, ಸ್ಮಾರಕಗಳು, ಕಟ್ಟಡಗಳು, ಸಲಕಣೆಗಳು, ಬಂಡೆಯ ಮೇಲಿನ ಚಿತ್ರಗಳು ಮತ್ತು ಶಾಸನಗಳು. ಬರವಣೆಗೆ ಶಾಸನ ರೂಪಕ್ಕೆ ಇಳಿದದ್ದು ಅಶೋಕನ ಕಾಲದಲ್ಲಿ. ಕ್ರಿಪೂ.೩ನೇ ಶತಮಾನದಿಂದ ಪ್ರಾರಂಭವಾಗಿ ಅರಸರು, ಸಾಮಂತರು, ದಂಡನಾಯಕರ, ಆಳ್ವಿಕೆಯುಗೂ ಮತ್ತು ಆಧುನಿಕ ಕಾಲದಲ್ಲಿ ಮುಂದುವರಿಯುತ್ತಿರುವುದನ್ನು ಕಾಣತ್ತಿದ್ದೇವೆ.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ದೇಶದ, ಒಂದು ನಾಡಿನ, ಒಂದು ಸ್ಥಳದ ಮಹತ್ವವನ್ನು ತಿಳಿಯಬೇಕಾದರೆ ಅಲ್ಲಿ ಸ್ಮಾರಕಗಳು, ಅವಶೇಷಗಳು, ಶಾಸನಗಳು ಮೂಲ ಆಕರಗಳಾಗಿ ಬಹುಮುಖ್ಯ ಪಾತ್ರವಹಿಸುತ್ತವೆ. ಹಿಂದಿನಿಂದಲೂ ರೂಢಿಸಿಕೊಂಡು ಬಂದ ಸಂಪ್ರದಾಯಗಳು, ಆಚರಣೆಗಳು ಜನರ ಮೇಲೆ ಪ್ರಭಾವ ಬೀರಿರುವುದರಿಂದ ಅಲ್ಲಿನ ಜನಸಾಮಾನ್ಯರ ಬದುಕಿನ ಇತಿಹಾಸದ ಜೊತಗೆ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವನ್ನು ವಿಸ್ತಾರಗೊಳಿಸಬೇಕಾಗಿರುವುದು ಅವಶ್ಯಕವಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ನೆಲೆಗಳು, ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ವಿಸ್ತಾರಗೊಳಿಸುವುದರ ಜೊತೆಗೆ ಆ ಸ್ಥಳದ ಅನನ್ಯತೆಯನ್ನು ಗುರುತಿಸಿಕೊಳ್ಳವಲ್ಲಿ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನ ಬಹಳ ಮಹತ್ವದ್ದಾಗಿ ಕಂಡು ಬರುತ್ತದೆ.

ಕೃಷ್ಣ ಮತ್ತು ತುಂಗಭದ್ರಾ ನದಿಗಳ ನಡುವೆ ಇರುವ 'ದೊ–ಅಬ್' ಪ್ರದೇಶ 'ಎಡದೊರೆ ನಾಡು' ಎಂಬ ನಾಮವನ್ನು ಹೊಂದಿರುವ ಫಲವತ್ತಾದ ಕಪ್ಪು ಮಣ್ಣಿನ ಪ್ರದೇಶ ಈ ರಾಯಚೂರು ಜಿಲ್ಲೆ. ಈ ಜಿಲ್ಲೆಯು ೫ ತಾಲೂಕುಳಿಂದ ಕೂಡಿದ್ದು ಅವುಗಳಲ್ಲಿ ವಿಶೇಷವಾಗಿ ದಾಸರ ನಾಡೆಂದು ನಾನಾ ರೀತಿಯ ಸಾಹಿತ್ಯ ವಿಚಾರಗಳು ಹೊರಬಂದಿರುವ ಮತ್ತು ವಿವಿಧ ವರ್ಗದಿಂದ ಬಂದ ತತ್ವಪದಕಾರರ ಸಾಹಿತ್ಯವೂ ಇಂದು ನಾವು ವೈಚಾರಿಕವಾಗಿ ಯೋಚಿಸಿ ಮಾಡುವ ಹಾಗೆ ಮಾಡಿವೆ. ಯಾವುದೇ

ಜಾತಿ ಜನವರ್ಗಕ್ಕೆ ಜೋತುಬೀಳದೆ ಎಲ್ಲಾ ಧರ್ಮಿಯರನ್ನು ಸಮಾನ ಮನಸಿನಿಂದ ಸ್ವೀಕರಿಸಿದ ನಾಡು ಎಂದು ಗುರುತಿಸಿಕೊಳ್ಳುವ ತಾಲೂಕು ಕೇಂದ್ರ ಮಾನ್ವಿ. ಇದು ರಾಯಚೂರಿನಿಂದ ೪೯ ಕಿ.ಮೀ. ದೂರದಲ್ಲಿರುವ ಈ ಪ್ರದೇಶವು ಅಂದಿನ ಗತವೈಭವ ಮತ್ತು ಸಂಸ್ಕೃತಿಯನ್ನು ಸಾರಿ ಹೇಳುವಂತ ಅನೇಕ ದೇವಾಲಯಗಳು, ಸ್ಮಾರಕಗಳು, ಕೋಟೆ–ಕೊತ್ತುಗಳು, ಶಾಸನಗಳು, ಸುಂದರ ವಿಗ್ರಹಗಳು. ಶರಣರ ಗದ್ದುಗೆಗಳು, ಮಸೀದಿ–ಮಠಗಳು, ಬಾವಿ–ಕೆರೆಗಳು, ಸಾಹಿತ್ಯ, ಸಂಗೀತ, ನಾಟಕ, ಬಯಲು ನಾಟಕ ಇನ್ನು ಮುಂತಾದ ಕಲೆಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಕಲಾಸಕ್ತರ ಆಸಕ್ತಿಯನ್ನು ಹೆಚ್ಚಿಸಿದೆ.

ರಾಯಚೂರಿನ ಪಶ್ಚಿಮ ಭಾಗದಲ್ಲಿರುವ ಈ ತಾಲೂಕು ಕೇಂದ್ರ ಸಮುದ್ರ ಮಟ್ಟಕ್ಕಿಂತ ೩೯. ೩ಮೀ ಎತ್ತರದಲ್ಲಿದ್ದು ೧೭೧ ಹಳ್ಳಿಗಳನ್ನು ಹೊಂದಿದೆ. ಬೇರೆ ಬೇರೆ ಗ್ರಾಮಗಳಿಗೆ ರಾಜ್ಯದ ಪ್ರಮುಖ ನದಿಯಾದ ತುಂಗಭದ್ರಾದಿಂದ ಎಡದಂಡೆ ಕಾಲುವೆಗಳ ಮೇಲು ಹರಿದು ಬರುವ ನೀರು ಈ ಪ್ರದೇಶದ ಕೃಷಿಯನ್ನು ಸಮೃದ್ಧಿಗೊಳಿಸಿದೆ. ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿರುವ ಈ ಪ್ರದೇಶವು ಪ್ರಾಚೀನ ಕಾಲದ ಮಾನವನ ವಸತಿ ನೆಲೆಗಳ ಕುರುಹುಗಳನ್ನು ಹೊಂದಿದೆ.

ಮಾನವ ಸಂಸ್ಕೃತಿಯ ವಿಕಾಸದಲ್ಲಿ ಶಿಲಾಶಾಸನಗಳ ಪಾತ್ರ ಮಹತ್ವದ್ದಾಗಿದೆ. ಮೊದಲೆಲ್ಲ ಮಾನವ ಬಿಸಿಲು–ಮಳೆಯ ರಕ್ಷಣೆಗೆ ನಂತರಲ್ಲಿ ಬದುಕಿನ ಮೌಲ್ಯಗಳ ಪ್ರಸಾರಕ್ಕೆ ಬಳಸಿಕೊಂಡು ಶಿಲೆಯನ್ನು ಕಟಿದು ಕಲೆಯಾಗಿಸಿದ. ಅನಂತರದಲ್ಲಿ ಬರೆಬರೆದು ಕೃತಿಯಾಗಿಸಿದ. ಈ ಮಾಧ್ಯಮವನ್ನು 'ಶಿಲ್ಪ' ಮತ್ತು 'ಶಾಸನ'ವೆಂದು ಕರೆಯಲಾಯಿತು. ಶಿಲ್ಪಗಳು ನಿರಕ್ಷರರಿಗೆ ಶಾಸನಗಳು ಅಕ್ಷರರಿಗೆ ಆಯಾ ಕಾಲದ ಜನಾಂಗಗಳ ಮೌಲ್ಯವನ್ನು ಬೋಧಿಸುವ ಪ್ರಸಾರ ಫಲಕಗಳಾಗಿ ಪ್ರಮಾಣಿಕ ದಾಖಲೆಗಳಾಗಿ ಅಲ್ಲಲ್ಲಿ ನೆಲೆನಿಂತಿವೆ.

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹುಮುಖ್ಯ ಒಂದು ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆ ಯಶಸ್ವಿಯಾಗಿ ಪೂರ್ಣಗೊಳ್ಳಲು ಇದು ತುಂಬಾ ಸಹಕಾರಿಯಾದೆ. "ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಸೀಮಿತಗೊಳಿಸಿಕೊಂಡು ಪ್ರಸ್ತುತ ಪ್ರಬಂಧದ ವ್ಯಾಪ್ತಿಯನ್ನು" ಕಲ್ಯಾಣಿ ಚಾಲ್ಯಕ್ಯರ ಕಾಲದಿಂದ ಪ್ರಾರಂಭವಾಗಿ ವಿಜಯನಗರದ ಅರಸರ ಕಾಲದವರೆಗೆ ಸೀಮಿತಗೊಳಿಸಲಾಗಿದೆ. ಇವರ ಕಾಲದಲ್ಲಿ ರಚನೆಗೊಂಡ ಈ ಎಲ್ಲ ಶಿಲಾ ಶಾಸನ, ಸ್ಮಾರಕ, ದೇವಾಲಯಗಳು ಇಂದು ಊರಿನ ಜನರ ನಿರ್ಲಕ್ಷ ಪುರಾತತ್ವ ಇಲಾಖೆಯವರು ಗಮನ ಹರಿಸದೇ ಇರುವುದರಿಂದ ಇವುಗಳು ಇಂದು ನಾನಾ ರೀತಿಯಲ್ಲಿ ಬಳಕೆಗೊಂಡಿವೆ. ಉದಾ: ವಾಸಿಸುವ ಮನೆಗಳಾಗಿಯೋ, ಜಾನುವಾರುಗಳ ವಾಸಿಸುವ ತಾಣಗಳಾಗಿಯೋ ಗೋಡೆಯ ಕಲ್ಲುಗಳಾಗಿಯೋ ಬಟ್ಟೆ ತೊಳೆಯುವ ಬಂಡೆಗಳಾಗಿ ನಲ್ಲಿ ನೀರಿನ ಕೆಳಗೆ ಹಾಸು ಬಂಡೆಗಳಾಗಿ, ಮೆಟ್ಟಿಲುಗಳಾಗಿ ಇನ್ನು ಅನೇಕ ರೀತಿಯಲ್ಲಿ ಬಳಕೆಗೊಂಡಿವೆ. ಇನ್ನು ಅಳಿದುಳಿದ ಸ್ಮಾರಕ, ಶಾಸನಗಳು ಕಾಲ ಗರ್ಭದಲ್ಲಿದು ಹುದುಗಿ ಹೋಗುತ್ತಿವೆ. ಅವುಗಳ ಕಡೆಗೆ ಗಮನ ಹರಿಸದೇ ಶಿಕ್ಷಿತರು ಶಿಕ್ಷಿತರು ನಿಧಿ ಸಿಗುತ್ತದೆ. ಎಂಬ ಆಸೆಗಾಗಿ ಅವುಗಳನ್ನು ಮಣ್ಣಲ್ಲಿಯೋ ಬಾವಿಯಲ್ಲಿಯೋ ಗೋಡೆಗಳ ಒಳಗೆ ಬಚ್ಚಿಟ್ಟಿರುವುದು ಕಂಡು ಬರುತ್ತದೆ.

## ಅಧ್ಯಯನದ ವಿಧಾನ

ಮಾನ್ವಿ ತಾಲೂಕು ಪ್ರದೇಶವು ಸಾಂಸ್ಕೃತಿಕ ದೃಷ್ಟಿಯಿಂದ ಸರ್ವ ಕ್ಷೇತ್ರಗಳಲ್ಲಿ ಅಪಾರ ಪ್ರಗತಿ ಸಾಧಿಸಿದ ಕೀರ್ತಿಯನ್ನು ಪಡೆದಿದ್ದರೂ ಈ ಎಲ್ಲಾ ಏಳು-ಬೀಳುಗಳನ್ನು ತನ್ನ ತೆಕ್ಕೆಯಲ್ಲಿ ಮರೆಮಾಚಿಸಿಕೊಂಡಿದೆ ಎಂಬುದು ಅದರ ಆಳ-ಅಗಲ ಅರಿತಾಗಲೇ ಗೊತ್ತಾಗುತ್ತದೆ.

ಈ ಎಲ್ಲ ಅಂಶಗಳಿಂದಾಗಿ ಮಾನ್ವಿ ತಾಲೂಕು ಪ್ರದೇಶದ ಇತಿಹಾಸಕ್ಕೆ ಸಂಬಂಧಿಸಿದ ಏನೆಲ್ಲ ಅಧ್ಯಯನಗಳು ನಡೆದಿದ್ದರೂ ಅದಕ್ಕೆ ಸಂಬಂಧಿಸಿದ ಲೇಖನಗಳು ಗ್ರಂಥಗಳಲ್ಲಿ ಕೆಲವು ಅಂಶಗಳು ಮಾತ್ರ ಉಲ್ಲೇಖಗೊಂಡಿದೆ. ಈ ಕೊರತೆಯನ್ನು ನಿಗಿಸುವ ದೃಷ್ಟಿಯಿಂದ ಈ ಭಾಗದ ಸ್ಥಳನಾಮಗಳು. ಅಗ್ರಹಾರಗಳು, ವಿದ್ಯಾಕೇಂದ್ರಗಳು, ಬ್ರಹ್ಮಪುರಿಗಳು, ಆಡಳಿತ ಕೇಂದ್ರಗಳು, ಶಿಲಾ ಸ್ಮಾರಕಗಳು ಇನ್ನುಳಿದ ಅವಶೇಷಗಳು ಇಷ್ಟೆಲ್ಲ ಪ್ರಮಾಣದಲ್ಲಿ ಚಾರಿತ್ರಿಕ ಸಾಮಗ್ರಿಗಳು ಲಭ್ಯವಿದ್ದರೂ ಅದನ್ನು ಬೆಳಕಿಗೆ ತರುವ ಕೆಲಸವನ್ನು ಮಾಡಲಾಗುವುದು.

ಈ ಮೊದಲು ಮಾನ್ವಿ ತಾಲೂಕಿನ ಶಾಸನಗಳನ್ನು ಓದಿ ಪ್ರಕಟಿಸಿದವರೆಂದರೆ ಜೆ.ಎಫ್.ಫ್ಲೀಟ್ ಅವರು ಎಪಿಗ್ರಾಫಿ ಕರ್ನಾಟಕ ಸಂಪುಟ ಭಾಗ-೩ರಲ್ಲಿ 'ಮಾನ್ವಿ' ಮತ್ತು 'ಕವುತಾಳ' ಈ ಎರಡು ಊರುಗಳ ಕೆಲವು ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಜಿ.ಪಿ.ಶಿವಾನಂದ ಅವರು "ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾ-ಶಾಸನಗಳು" ಎಂಬ ಕೃತಿಯಲ್ಲಿ ಈ ತಾಲೂಕಿಗೆ ಸಂಬಂಧಿಸಿದ ಯಾವ ಶಾಸನಗಳನ್ನು ಚರ್ಚಿಸಿಲ್ಲ. ಹನುಮಾಕ್ಷಿ ಗೋಗಿಯವರು "ಅನುಶಾಸನ" ಎನ್ನುವ ತಮ್ಮ ಶಾಸನಗಳ ಕೃತಿಯಲ್ಲಿ 'ಕವುತಾಳದ' ಶಾಸನಗಳನ್ನು ಮಾತ್ರ ಪ್ರಕಟಿಸಿದ್ದಾರೆ. ಡಾ.ಚನ್ನಬಸವ ಹಿರೇಮಠ ಅವರು 'ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಶಾಸನಗಳು' ಎಂಬ ಪುಸ್ತಕದಲ್ಲಿ ಮಾನ್ವಿ ತಾಲೂಕಿನ ಯಾವುದೇ ಒಂದು ಶಾಸನವನ್ನು ತೆಗೆದುಕೊಂಡಿಲ್ಲ. ಸೂರ್ಯನಾಥ ಯು.ಕಾಮತ್ ಅವರು ಕರ್ನಾಟಕ ರಾಜ್ಯ ಗೆಜಟೀಯರ್ ಭಾಗ-೩ರಲ್ಲಿ ಮಾನ್ವಿ ತಾಲೂಕಿನ ಸಂಕ್ಷಿಪ್ತ ಮಾಹಿತಿಯನ್ನು ಮಾತ್ರ ಕೊಟ್ಟಿದ್ದಾರೆ. ದೇವರ ಕೊಂಡಾರೆಡ್ಡಿಯವರ ಸಂಪಾದಕತ್ವದಲ್ಲಿ ಹೊರತಂದಿರುವ 'ರಾಯಚೂರು ಜಿಲ್ಲಾಶಾಸನ' ಸಂಪುಟದಲ್ಲಿ ಮಾನ್ವಿ ತಾಲೂಕಿನ ಶಾಸನಗಳನ್ನು ಪ್ರಕಟಿಸಿದ್ದಾರೆ. ಭಾರತಿ ಬಸವರಾಜ ಅವರು "ರಾಯಚೂರು ಜಿಲ್ಲೆ ಶಾಸನಗಳ ಸಮಗ್ರ ಅಧ್ಯಯನ" ಎಂಬ ಪಿ.ಎಚ್.ಡಿ. ಗ್ರಂಥದಲ್ಲಿ ಕೆಲವೊಂದು ಶಾಸನಗಳ ಸಂಕ್ಷಿಪ್ತ ಮಾಹಿತಿಯನ್ನು ಬಳಸಿಕೊಂಡಿದ್ದಾರೆ. ಡಾ.ಚನ್ನಬಸವ  ಹಿರೇಮಠ ಅವರು 'ಎಡದೊರೆ ನಾಡು' ಎಂಬ ಪುಸ್ತಕದಲ್ಲಿ ಮಾನ್ವಿ ತಾಲೂಕಿನ ಆಡಳಿತ ವಿಭಾಗಗಳನ್ನು ಕುರಿತು ಮಾಹಿತಿ ಒದಗಿಸಿದ್ದಾರೆ. ಸುಜಾತ ಮಲ್ಲನಗೌಡರು "ರಾಯಚೂರು ಕೊಪ್ಪಳ ಜಿಲ್ಲೆಯ ಕೋಟೆ ಕೊತ್ತಲಗಳು : ಒಂದು ಅಧ್ಯಯನ"ದಲ್ಲಿ ಮಾನ್ವಿ ತಾಲೂಕಿನ ಆಡಳಿತ ವಿಭಾಗಗಳನ್ನು ಕುರಿತು ಮಾಹಿತಿಯನ್ನು ಕುರಿತು ಚರ್ಚಿಸಿದ್ದಾರೆ. ಕೆ.ಪಿ.ಶಿವತಾರಕ್ ಅವರು "ಕರ್ನಾಟಕದ ಪುರಾತತ್ವ ನೆಲೆಗಳು" ಎಂಬ ಗ್ರಂಥದಲ್ಲಿ ಮಾನ್ವಿ ತಾಲೂಕಿನ ಪುರಾತತ್ವ ನೆಲೆಗಳ ಕುರಿತು ಮಾಹಿತಿಯನ್ನು ಒದಗಿಸಿದ್ದಾರೆ. ಸೂರ್ಯನಾಥ ಯು.ಕಾಮತ್ ಅವರು ಕರ್ನಾಟಕ ಸರಕಾರ ಪ್ರಕಟಣೆಯ ಕರ್ನಾಟಕ

ಗೆಜಿಟೀಯರ್ ಭಾಗ-೩ರಲ್ಲಿ ಪ್ರೇಕ್ಷಣೀಯ ಸ್ಥಳಗಳು ಎಂಬ ಭಾಗದಲ್ಲಿ ಮಾನ್ವಿಯನ್ನು ಗುರುತಿಸಿದ್ದಾರೆ. ಜೆ.ಎಂ. ನಾಗಯ್ಯವರು '೬ನೇ ವಿಕ್ರಮಾದಿತ್ಯನ ಶಾಸನಗಳು' ಎಂಬ ಪುಸ್ತಕದಲ್ಲಿ ಕಲ್ಲೂರಿನ ಶಾಸನಗಳ ಕುರಿತು ತಿಳಿಸಿದ್ದಾರೆ.

ಸಂಸ್ಕೃತಿ ಎಂದ ತಕ್ಷಣ ತಮ್ಮ ನನೆಪಿಗೆ ಬರುವುದು ಜನಪದ ಆಚರಣೆಗಳು, ಸಾಮಾಜಿಕ, ಧಾರ್ಮಿಕ ಆಚರಣೆಗಳು, ಸಂಪ್ರಾದಾಯಗಳು, ಜಾತ್ರೆಗಳು, ಹಬ್ಬಗಳು, ಕ್ರೀಡೆಗಳು ಮುಂತಾದವುಗಳ ಸೊಗಡು ಅಡಗಿರುವ ಮೂಲ ಬೇರು ಈ ಹಳ್ಳಿಗಳು ಎಂದರೆ ತಪ್ಪಾಗಲಿಕ್ಕಿಲ್ಲ. ಆದರೆ ಇಂದು ಆಧುನಿಕತೆಯೆಡೆಗೆ ಸಿಕ್ಕು ನಮ್ಮಿಂದ ಬಹುದೂರವಾಗುತ್ತಿದೆ. ಇತಿಹಾಸದ ಜೊತೆಗೆ ಬೇರೆ ಬೇರೆ ಊಹಾ-ಪೋಹಗಳು, ಕಟ್ಟು-ಕಥೆಗಳು ಸೇರಿಕೊಂಡು ನಿಜ ಇತಿಹಾಸ ಕಣ್ಮರೆಯಾಗುತ್ತಿದೆ. ಇಂದಿನ ಸಮಾಜದ ಸಾಮಾಜಿಕರಣದಿಂದಾಗಿ ಇದಕ್ಕೆ ಮಾನ್ವಿ ತಾಲೂಕು ಕೂಡಾ ಹೊರತಾಗಿಲ್ಲ. ಗತಕಾಲದ ಅರಿವು ವರ್ತಮಾನಕ್ಕೆ ಇದ್ದರೆ ಅದು ದಾರಿದೀವಿಗೆಯಂತೆ ಮುಂದಿನ ಪೀಳಿಗೆಯವರಿಗೆ ಉಳಿಸಿಕೊಂಡು ಬರಬೇಕಾಗಿದೆ. ಇಲ್ಲದಿದ್ದರೆ ಆದು ಅಂತೆ ಕಂತೆಗಳ ಮಾತಾಗುತ್ತದೆ. ಆಧಾರಗಳೇ ಇಲ್ಲವಾಗುತ್ತವೆ.

ಈ ಭಾಗದಲ್ಲಿ ೧೦೦ಕ್ಕಿಂತ ಹೆಚ್ಚಿನ ಶಾಸನಗಳು ಕಂಡುಬರುತ್ತವೆ. ದೊರೆತಿರುವ ಶಾಸನಗಳಲ್ಲಿ ದಾನ ಶಾಸನಗಳೇ ಹೆಚ್ಚು. ವೈಷ್ಣವ ದೇವಾಲಯಳಿಗಿಂತ ಶೈವ ದೇವಾಲಯಗಳ ಸಂಖ್ಯೆಯೇ ಹೆಚ್ಚಾಗಿ ಕಂಡು ಬರುತ್ತವೆ. ಮಾನ್ವಿ ಕುರುಕುಂದಿ, ಮಲ್ಲಟ, ಕಲ್ಲೂರು, ಕವಿತಾಳಗಳಲ್ಲಿ ಸಣ್ಣ ಪುಟ್ಟ ಕೋಟೆಗಳು ಕಂಡು ಬಂದಿವೆ. ಆಡಳಿತ ವಿಭಾಗಗಳನ್ನು ಅಗ್ರಹಾರ ಬ್ರಹ್ಮಪುಗಳನ್ನು ಒಳಗೊಂಡಿವೆ ಎನ್ನುವುದಕ್ಕೆ ಆದಾರಗಳಿವೆ. ಆದಿ ಮಾನವನ ನೆಲೆಗಳು ಕೂಡಾ ದೊರತಿವೆ. ಇದಲ್ಲದೆ. ರಾಜರುಗಳು-ರಾಣಿಯರು ಮಾಂಡಲಿಕರು, ಸಾಮಂತರು ದಂಡನಾಯಕರು ಆಳ್ವಿಕೆಯ ಪ್ರಾದೇಶ, ವ್ಯಾಪ್ತಿ, ವಿಭಾಗ ಮುಂತಾದವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ವಿವರಿಸುವ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಪುನರ್‌ರಚಿಸುವ ಪ್ರಯತ್ನ ಮಾಡಲಾಗುವುದು. ಹಿಂದೆ ನಡೆದಿರುವ ಸಂಶೋಧನೆಗಳನ್ನು ಆಧಾರವಾಗಿಟ್ಟುಕೊಂಡು ಅಧ್ಯಯನವನ್ನು ವಿಸ್ತರಿಸುವ ಉದ್ದೇಶ ಹೊಂದಿದೆ.

## ಅಧ್ಯಯನದ ವೈಧಾನಿಕತೆ

ಈ ಅಧ್ಯಯನದಲ್ಲಿ 'ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಪ್ರಾಥಮಿಕ ಮತ್ತು ಇತರೆ ಆಕರಗಳನ್ನು ಬಳಸಿಕೊಳ್ಳವುದರ ಜೊತೆಗೆ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಈ ಭಾಗದಲ್ಲಿ ಶಾಸನಗಳನ್ನು ಹೊಂದಿರುವ ಗ್ರಾಮಗಳಿಗೆ ಖುದ್ದಾಗಿ ಭೇಟಿ ನೀಡಿ ಅಲ್ಲಿನ ವಿವರಗಳನ್ನು ಪರಿಶೀಲಿಸಿ ದಾಖಲಿಸಿಕೊಳ್ಳವುದು. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು ವೈಜ್ಞಾನಿಕ ವಿಧಿ-ವಿಧಾನಗಳ ಮೂಲಕ ವಿಭಾಗಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗುವುದು. ಪ್ರಸ್ತುತ 'ಮಾನ್ವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ೬ ಅಧ್ಯಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ಮಾನ್ವಿ ತಾಲೂಕಿನ ಭೌಗೋಳಿಕ ಪರಿಸರ, ಪದನಿಷ್ಪತ್ತಿ ಮತ್ತು ಐತಿಹಾಸಿಕ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ದ್ವಿತೀಯ ಹಂತದಲ್ಲಿ ಧಾರ್ಮಿಕ ಹಿನ್ನೆಲೆಯಾಗಿ ಶೈವ ಮತ್ತು ವೈಷ್ಣವ ದೇವಾಲಯಗಳ ವಾಸ್ತು, ಮೂರ್ತಿಶಿಲ್ಪ, ಮಂಟಪ ಹಾಗೂ ಶಿಕ್ಷಣದ ಹಿನ್ನೆಲೆಯಲ್ಲಿ ಅಗ್ರಹಾರ ಮತ್ತು ಬ್ರಹ್ಮಪುರಿಗಳನ್ನು ಪರಿಚಯಿಸಲಾಗುವುದು. ತೃತೀಯ ಹಂತದಲ್ಲಿ ಅಧ್ಯಯನದಲ್ಲಿ ಮಾನ್ವಿ ತಾಲೂಕಿನ ಐತಿಹಾಸಿಕ ಹಿನ್ನೆಲೆಯಲ್ಲಿ ಪ್ರಮುಖ ಗ್ರಾಮಗಳ ಪದನಿಷ್ಪತ್ತಿ ಭೌಗಳೀಕ ಪರಿಸರ ಮತ್ತು ಚರಿತ್ರೆಯನ್ನು ಕುರಿತು ಚರ್ಚಿಸಲಾಗುವುದು.

ನಾಲ್ಕನೆಯ ಹಂತದ ಅಧ್ಯಾಯದಲ್ಲಿ ತಾಲೂಕಿನ ಪುರಾತತ್ವ ಸ್ಮಾರಕಗಳಲ್ಲಿ ದೇವಾಲಯಗಳ ವಾಸ್ತುಕಲೆ, ಮೂರ್ತಿ ಶಿಲ್ಪಗಳು, ಕೋಟೆ–ಕೊತ್ತಲಗಳ ಕುರಿತು ಪರಿಚಯಿಸಲಾಗುವುದು.

ನಾಲ್ಕನೇ ಅಧ್ಯಾಯದಲ್ಲಿ ಈ ಭಾಗದ ಶಾಸನಗಳಲ್ಲಿ ನಾನಾ ಶಾಸನ, ಸ್ಮಾರಕ ಶಾಸನಗಳು ಮತ್ತು ಇನ್ನಿತರ ಶಾಸನಗಳ ಮಾಹಿತಿಯನ್ನು ಪ್ರಾಸ್ತಪಿಸಲಾಗುವುದು.

ಐದನೇ ಹಂತದ ಅಧ್ಯಾಯದಲ್ಲಿ ಈ ತಾಲೂಕಿನಲ್ಲಿ ಆಳ್ವಿಕೆ ಮಾಡಿದ ಅರಸರ ಆಡಳಿದತದ ಕುರಿತು ಆರ್ಥಿಕ ವ್ಯವಸ್ಥೆ, ಸಾಮಾಜಿಕ ಸ್ಥಿತಿಗತಿಗಳು ಸಾಂಸ್ಕೃತಿಕ, ಆಚರಣೆಗಳು ಇವುಗಳ ಮಾಹಿತಿಯನ್ನು ಕೊಡಲು ಪ್ರಯತ್ನಿಸಲಾಗಿದೆ.

ಕೋನೆಯ ಮತ್ತು ಆರನೆಯ ಅಧ್ಯಾಯದಲ್ಲಿ ಸಮಾರೋಪದಲ್ಲಿ ಒಟ್ಟಾರೆ ಅಧ್ಯಯನದ ಮುಖ್ಯ ವಿಚಾರಗಳ ಜೊತೆಗೆ ಅಧ್ಯಯನದಿಂದ ಕಂಡು ಕೊಂಡು ಮುಖ್ಯಾಂಶಗಳನ್ನು ಮಂಡಿಸಲಾಗಿದೆ. ಅನುಬಂದಾದಲ್ಲಿ ಗ್ರಂಥಸೂಚಿ, ಮಾನ್ವಿ ತಾಲೂಕಿನ ಶಾಸನಗಳ ಪಾಠಗಳು ಛಾಯಾ ಚಿತ್ರಗಳು ನಕ್ಷೆಗಳ ಮೂಲಕ ಮಾಹಿತಿಯನ್ನು ಒದಗಿಸಲು ಪ್ರಯತ್ನಿಸಲಾಗಿದೆ.

ಒಟ್ಟಾರೆಯಾಗಿ ಈ ತಾಲೂಕಿನಲ್ಲಿ ೧೨೨ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ದೇವಾಲಯಗಳನ್ನು ಕೋಟೆ–ಕೊತ್ತಲಗಳನ್ನು, ಸ್ಮಾರಕ, ಅವಶೇಷಗಳ ಸಂಪೂರ್ಣ ಮಾಹಿತಿಯನ್ನು ಒದಗಿಸಲು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.



## ಪೀಠಿಕೆ

ಪ್ರತಿಯೊಂದು ಊರು ಒಂದಲ್ಲ ಒಂದು ರೀತಿಯಿಂದ ತನ್ನದೇ ಆದ ವ್ಯಾಪ್ತಿಯಲ್ಲಿ ಭೌಗೋಳಿಕ ಪರಿಸರ, ಐತಿಹಾಸಿಕ ಮಹತ್ವ ಊರುಗಳ ಪದನಿಷ್ಪತ್ತಿಯ ಜೊತೆಗೆ ಪುರಾಣ, ಐತಿಹ್ಯ ಮುಂತಾದವುಗಳನ್ನು ಒಳಗೊಂಡಿರುತ್ತದೆ. ಹಾಗೆ ಅನೇಕ ದಂಥಕಥೆಗಳು ಸಹ ಆ ಊರಿನಲ್ಲಿರುವ ದೇವರುಗಳ ಕುರಿತಾದ ಮೌಖಿಕ ಆಕರಗಳಿಂದಲೂ ನಾವು ಆ ಊರಿನ ಪ್ರಾಚೀನತೆ ಮತ್ತು ವಿಶಿಷ್ಟತೆ, ಮಹತ್ವ ಅಡಗಿರುವುದನ್ನು ಕಾಣುತ್ತೇವೆ. ಹಾಗೇನೆ ಮಾನ್ವಿ ತಾಲೂಕಿಗೆ ಸಂಬಂಧಸಿದ ಐತಿಹಾಸಿಕ ಹಿನ್ನೆಲೆ, ಭೌಗೋಳಿಕ ಪರಿಸರ ಆ ತಾಲೂಕಿನ ಅಡಿಯಲ್ಲಿ ಬರುವ ಗ್ರಾಮದ ಪದನಿಷ್ಪತ್ತಿಯನ್ನು ಕುರಿತು ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ.

## ೨.೧. ಭೌಗೋಳಿಕ ಪರಿಸರ

ರಾಯಚೂರು ಜೆಲ್ಲೆಯು ಒಳಗೊಂಡಿರುವ ಐದು ತಾಲೂಕು ಕೇಂದ್ರಗಳ ವಿಸ್ತೀರ್ಣದಲ್ಲಿ ಮಾನ್ವಿ ಮಿಕ್ಕ ತಾಲೂಕುಗಳಿಗಿಂತ ದೊಡ್ಡದು. ಇದರ ಪೂರ್ವದಲ್ಲಿ ರಾಯಚೂರು ಪಶ್ಚಿಮದಲ್ಲಿ ಲಿಂಗಸೂಗೂರು ಉತ್ತರಕ್ಕೆ ದೇವದುರ್ಗ ಮತ್ತು ದಕ್ಷಿಣಕ್ಕೆ ಸಿಂಧನೂರು ಮತ್ತು ಆಂದ್ರಪ್ರದೇಶದ ಗಡಿ ಭಾಗವನ್ನು ಹೊಂದಿರುವುದರಿಂದ ಆಂದ್ರದ ಸಂಸ್ಕೃತಿಯು ಈ ತಾಲೂಕಿನ ಮೇಲೆ ಭಾವನಾತ್ಮಕ ಸಂಬಂಧ ಮೂಡಿಸಿದೆ. ಐತಿಹಾಸಿಕವಾಗಿ, ಭೌಗೋಲಿಕವಾಗಿ ಹಾಗೂ ಪ್ರಾಕೃತಿಕವಾಗಿ ಇದು ತನ್ನದೇ ಆದ ವೈಶಿಷ್ಟ್ಯಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ಸಾಂಸ್ಕೃತಿಕವಾಗಿ ಹಾಗೂ ಸಾಹಿತ್ಯಿಕವಾಗಿಯೂ ಈ ತಾಲೂಕು ಬಹು ಮಹತ್ವದ್ದಾಗಿದೆ.

ಭೌಗೋಳಿಕವಾಗಿ ಮಾನ್ವಿ ತಾಲೂಕು ಬಯಲು ಪ್ರದೇಶವಾಗಿದೆ. ಕಪ್ಪು ಮತ್ತು ಕೆಂಪು ಬಣ್ಣದ ಇಲ್ಲಿಯ ಮಣ್ಣು ಫಲವತ್ತತೆಯಿಂದ ಕೂಡಿದೆ. ತಾಲೂಕಿನ ಪೂರ್ವ ದಿಕ್ಕಿನಲ್ಲಿ [illegible]

ಫಲವತ್ತಾದ ಮಡೆಕಟ್ಟು ಭೂಮಿ ಕೃಷಿಗೆ ಯೋಗ್ಯವಾಗಿದೆ. ಈ ತಾಲೂಕಿನ ಅನೇಕ ಬೆಟ್ಟ, ಗುಡ್ಡ, ಕುಂದೆಗಳಿಂದ ಆವೃತ್ತವಾಗಿದೆ. ಮಾನ್ವಿ ಮತ್ತು ಕಲ್ಲೂರಿನ ಬೆಟ್ಟಗಳು ಈ ತಾಲೂಕಿನಲ್ಲಿ ಅತ್ಯಂತ ಎತ್ತರವಾಗಿದ್ದು ಅವುಗಳಲ್ಲಿ ಬೆಲೆಬಾಳುವ ಗಿಡಮೂಲಿಕೆ ಮತ್ತು ತಾಮ್ರ-ಚಿನ್ನದ ನಿಕ್ಷೇಪಗಳು ದೊರೆಯುತ್ತವೆ. ಗಣಿಗಾರಿಕೆಗೆ ಅನುಕೂಲಕರವಾದ ಕಣಶಿಲೆಗಳ ಗುಡ್ಡಗಳು ಈ ತಾಲೂಕಿನಲ್ಲಿ ಇದ್ದು ಕೆಲವೆಡೆ ಇಳಿಜಾರು ಪ್ರದೇಶವಾಗಿದ್ದರೆ ಮತ್ತೊಂದೆಡೆ ದಿನ್ನಿ ಮತ್ತು ಮೊರಡಿ ಪ್ರದೇಶಗಳು ಆವರಿಸಿಕೊಂಡಿವೆ. ನದಿ ಮತ್ತು ಚಿಕ್ಕ ತೊರೆ (ನಾಲಾ)ಗಳು ತಾಲೂಕಿನ ಕೃಷಿಗೆ ಅನುಕೂಲವಾಗಿವೆ. ಇಲ್ಲಿಯ ಅಂತರ್‌ಜಲ ಸೌಲಭ್ಯದಿಂದಾಗಿ ತೋಟಗಾರಿಕೆಗೆ ಹೆಚ್ಚು ಸುಗಮವಾಗಿದೆ.

ಪ್ರಾಕೃತಿಕವಾಗಿ ಸಮೃದ್ಧಿ ಸಂಪತ್ತನ್ನು ನೆಲೆಗೊಳಿಸಲು ಯೋಗ್ಯವಾದ ಸಂಪತ್ತು ಈ ತಾಲೂಕಿನ ವರದಾನವಾಗಿ ಸಂಭವಿಸಿದೆ. ಜನರ ಸುಖ, ಸಂತೋಷಗಳಿಂದ ನೆಮ್ಮದಿಯ ಬಾಳನ್ನು ಸಾಗಿಸಲು ಈ ತಾಲೂಕು ಸದಾ ದೈವಪ್ರೇರಣೆಯನ್ನು ಪಡೆದುಕೊಂಡಿದೆ. ಇಲ್ಲಿ ಅನೇಕ ಶಿವಶರಣರು, ಹರಿದಾಸರು ಮತ್ತು ತತ್ವಪದಕಾರರು ಜನಿಸಿ ತಮ್ಮ ವಚನ ಕೀರ್ತನೆ ಪದಗಳಿಂದ ಜನರ ಬದುಕನ್ನು ಹಸನಗೊಳಿಸಿದ್ದಾರೆ. ಇವುಗಳಲ್ಲದೆ ತಾಲೂಕಿನಲ್ಲಿರುವ ಸ್ಥಳನಾಮಗಳಲ್ಲಿ ಇಡೀ ಮಾನ್ವಿ ತಾಲೂಕಿನ ಸಾಹಿತ್ಯ, ಸಂಸ್ಕೃತಿ ಪ್ರಾದೇಶಿಕ ವೈವಿದ್ಯತೆ ಹಾಗೂ ಜನರು ಬಾಳಿ ಬದುಕಿದ ಭವ್ಯತೆಯ ವೈಭವ ಅಡಗಿಸಿಕೊಂಡಿದೆ.

ಇದಲ್ಲದೆ ಈ ಭಾಗದಲ್ಲಿ ಆದಿ ಮಾನವನ ನೆಲೆಗಳು ಕಂಡು ಬಂದಿದ್ದರಿಂದ ಇದರ ಇತಿಹಾಸ ಶಿಲಾಯುಗದ ಹಿಂದಕ್ಕೆ ಹೋಗುತ್ತದೆ. ಇಂಥ ಮಹತ್ವಪೂರ್ಣವಾದ ಐತಿಹಾಸಿಕ ಮತ್ತು ಪ್ರಾಚೀನತೆಯನ್ನು ಕೈವಾಡಿ ತೊರಿಸುವ ಈ ಭಾಗದ ಇತಿಹಾಸಕ್ಕೆ ಸಮಬಂಧಸಿದ ಮಾಹಿತಿಯನ್ನು ತಮದುಕೊಡುವುದಾಗಿರುತ್ತದೆ.

ಮಾನ್ವಿ ತಾಲೂಕಿನ ಒಟ್ಟು ಭೂ ವಿಸ್ತೀರ್ಣ ೧೭೯೨೨೩ ಹೆಕ್ಟೇರು ಪ್ರದೇಶದಲ್ಲಿ ಸಾಗುವಳಿಗೆ ಯೋಗ್ಯವಾದ ಭೂಮಿ ಸುಮಾರು ೧೩೦೬೦೫ ಹೆಕ್ಟೇರು ಹಾಗೆ ಸಾಗುವಳಿಗೆ ಯೋಗವಲ್ಲದ ಭೂಮಿ ೬೧೧ ಹೆಕ್ಟೇರು ಇದರಲ್ಲಿ ಅರಣ್ಯ ಭಾಗ ಹೊಂದಿರುವ ಪ್ರದೇಶ ೨೩೧೨ ಹೆಕ್ಟೇರು ಹೊಳೆ, ಹಳ್ಳಿ, ನದಿ, ನಾಲೆಗಳಿಗೂ ಕೂಡಾ ಭೂಮಿ ಒಳಪಟ್ಟಿದೆ. ಹೀಗೆ ಭೌಗೋಳಿ ಕ್ಷೇತ್ರವನ್ನು ಹೊಂದಿರುವ ಮಾನ್ವಿ ತಾಲೂಕಿನಲ್ಲಿ ಒಟ್ಟು ೧೭೧ ಗ್ರಾಮಗಳಿದ್ದು ಇದರಲ್ಲಿ ೭ ಗ್ರಾಮಗಳು ಜನವಾಸರಹಿತವಾಗಿವೆ. ಜನಸಂಖ್ಯೆ ಸುಮಾರು ೩,೩೦,೭೧೯ (೧೯೯೧ರ ಗಣತಿ) ಇದ್ದು ಗ್ರಾಮಗಳಲ್ಲಿ ೨೯೩.೧೦೬ ಜನಸಂಖ್ಯೆ ಇದ್ದು ಪಟ್ಟಣದಲ್ಲಿ ೩೭.೬೧೩ ಕಷ್ಟ ಜನ ವಾಸ ಮಾಡುತ್ತಿದ್ದಾರೆ.

ನೀರಾವರಿ :

| | | |
|---|---|---|
| ಒಟ್ಟು ಹಿಡುವಳಿದಾರರು | : ೪೫೩೯ | : ೧೫೯೧೪ ಕ್ಷೇತ್ರ |
| ಅತಿ ಸಣ್ಣ ರೈತರು | : ೮೪೮೩ | : ೫೪೪೭ ಹೆಕ್ಟೇರು |
| ಸಣ್ಣ ರೈತರು | : ೧೧೯೦೩ | : ೧೭೪೦೨ ಹೆಕ್ಟೇರು |
| ಅತಿ ಮಾಧ್ಯಮ | : ೧೨೩೫೭ | : ೩೪೯೯೮ ಹೆಕ್ಟೇರು |

ಮಾಧ್ಯಮ : ೧೦೨೨೮ : ೬೨೪೪೪ ಹೆಕ್ಟೇರು

ದೊಡ್ಡವರು : ೨೫೨೪ : ೩೭೬೫೦ ಹೆಕ್ಟೇರು

ನೀರಾವರಿ ಎಂದಾಗ ಬಾವಿ, ಕೆರೆ, ಅಣೆಕಟ್ಟು ಮತ್ತು ಭೂಮಿ ಕೊರೆದು ಬೋರ್‌ವೆಲ್ ಮುಖಾಂತರ ನೀರಾವರಿಗೆ ಒಳಪಟ್ಟಿರುವುದು. ೪ ಕೆರೆಗಳಿಂದ ೨೮೦ ಹೆಕ್ಟೇರು ಭೂಮಿ ೮೯೦ ಹೆಕ್ಟೇರು ಬಾವಿಗಳಿಂದ ೨೩೫೯ ಹೆಕ್ಟೇರು, ಒಟ್ಟು ೬೫೮೭೫ ಎಕರೆ ತುಂಗಭಾದ್ರ ಎಡದಂಡೆ ಕಾಲುವೆ ಸಂಖ್ಯೆ ೮೫ ಮತ್ತು ೮೯ ಈ ಕಾಲುವೆಗಳ ಮೂಲಕ ನೀರಾವರಿಗೆ ಒಳಪಟ್ಟಿರುವ ಒಡ್ಡು ಭೂಮಿ ೫೬೦೦೦ ಹೆಕ್ಟೇರು ಹೀಗೆ ೫೮೬೯೩ ಹೇಕ್ಟೇರಗಿಂತಲೂ ಅಧಿಕ ಭೂಮಿ ನೀರಾವರಿಗೆ ಒಳಪಪಟ್ಟು ಕೃಷಿಗೂ ಸಪ ಹೆಸರುವಾಸಿಯಾಗಿರುವ ಈ ಭಾಗದ ಮಹತ್ವವನ್ನು ಸಾರುತ್ತದೆ.

ಈ ಮೇಲೆ ತೋರಿಸಿದ ಭೌಗೋಳಿಕ ವಿವರದ ಆಧಾರದಿಂದ ಶೇಕಡ ೫೦ರಷ್ಟು ನೀರಾವರಿ ಪ್ರದೇಶವಾಗಿದ್ದು, ಇನ್ನುಳಿದದ್ದು ಮಳೆಯಾಧಾರಿತವಾಗಿ ಶೇಕಡ ೫೦ರಷ್ಟು ಭಾಗ ನೀರವಾರಿಗೆ ಒಳಪಟ್ಟಿದ್ದರೂ ನೀರಿನ ನಿರ್ವಹಣೆ ಸಮರ್ಪಕವಾಗಿಲ್ಲದೆ ಸುಮಾರು ೧೫ ವರ್ಷಗಳಿಂದ ಈ ತೊಂದರೆಯನ್ನು ಅನುಭವಿಸುತ್ತ ಸಾಗಿದೆ. ಸದ್ರಿ ಪ್ರದೇಶವೂ ಕೂಡ ಮಳೆಯನ್ನು ಅವಲಂಭಿಸುವಂತಾಗಿದೆ. ಮಾನ್ವಿಯ ಮೇಲಿನ ಕಾಲುವೆ ಸಂಖ್ಯೆ ೮೯ರಿಂದ ಆಕ್ರಮವಾಗಿ ೨೨ಗ್ರಾಮಗಳು ನೀರನ್ನು ಬಳಸಿಕೊಂಡು ೩೦೩೨೧೯ರೂಗಳನ್ನು ದಂಡವಾಗಿ ಪವಾತಿಸುತ್ತಿದ್ದಾರೆ. ಅದೇ ರೀತಿಯಾಗಿ ನೀರಮಾನ್ವಿಯ ಮೇಲಿನ ಕಾಲುವೆ ಸಂಖ್ಯೆ ೮೫ ರಿಂದ ಒಟ್ಟು ೧೩ಗ್ರಾಮಗಳು ನೀರನ್ನು ಆಕ್ರಮವಾಗಿ ಬಳಸಿಕೊಂಡು ೬೬೫೧೩೪ ರೂ.ಗಳನ್ನು ದಂಡವಾಗಿ ಪವಾತಿಸುತ್ತಿದ್ದಾರೆ[೯]. (ಸಹಾಯಕ ಕಾರ್ಯ ನಿರ್ವಹಕ ಅಭಿಯಂತರು ಸಂಖ್ಯೆ–೩ ಕಾಲುವೆ ಉಪ ವಿಭಾಗ ಮಾನ್ವಿ ಎಸ್.ಸಿ. ನಿಂಗಪ್ಪ ಎ.ಇ.ಇ. ಮಾಹಿತಿಯನ್ನು ಒದಗಿಸಿದರು.)

ಬರಗಾಲದ ನಾಡಾದ ಬುದ್ಧಿನ್ನಿ, ಹೀರಾ ಭಾಗದಲ್ಲಿ ಸಣ್ಣ ಪ್ರಮಾಣದ ನೀರಿನ ಕಟ್ಟೆಗಳನ್ನು ಕಟ್ಟಿಸಿ (ಚೆಕ್ ಡ್ಯಾಂ) ಆ ಮುಖಾಂತರ ಅಂತರ್‌ಜಲ ಹೆಚ್ಚಿಸಿ ಸಣ್ಣ ನೀರಾವರಿ ಮುಖಾಂತರ ಆ ಪ್ರದೇಶವನ್ನು ಮಲೆನಾಡು ಪ್ರದೇಶದಂತೆ ಮಾಡಲು ಸಾಧ್ಯವಿದೆ. ಏಕೆಂದರೆ ಅಲ್ಲೆಲ್ಲಾ ತಗ್ಗು ದಿನ್ನೆಗಳಿಂದ ಕೂಡಿವ ಮೇಲ್ಮೈ ಲಕ್ಷಣವನ್ನು ಹೊಂದಿದೆ.

ಈ ಭಾಗದ ನೆಲ ಕಪ್ಪು ಕೆಂಪು ಮರಳು ಮಿಶ್ರಿತ ಸವಳು ಇದ್ದು ಕಪ್ಪು ಮಣ್ಣು ಹೆಚ್ಚಾಗಿ ಕಂಡುಬರುತ್ತದೆ. ಭತ್ತ ಬೆಳೆಯಲು ಬೇಕಾದ ಉಷ್ಣತೆ ವಾತಾವರಣದಲ್ಲಿ ಇರುವುದರಿಂದ ಎಕರೆಗೆ ೩೪೩೮ ಚೀಲ (೭೦ಕೆ.ಜಿ.) ಭತ್ತದ ಬೆಳೆ ಬರುತ್ತದೆ. ಇದಲ್ಲದೆ ಸೂರ್ಯಕಾಂತಿ, ಬಿಳಿಜೋಳ, ಹೈಬ್ರಿಡ್ ಜೋಳ, ಸಜ್ಜೆ, ನವಣೆ, ಹತ್ತಿ, ಶೆಂಗಾ, ಈರುಳ್ಳಿ, ದ್ವಿದಳ ಧಾನ್ಯಗಳನ್ನು (ಅಕ್ಕಡಿ ಧಾನ್ಯಗಳು) ಬೆಳೆಯುತ್ತಾರೆ.

ನಯನ ಮನೋಹರವಾದ ತುಂಗಭದ್ರಾ ನದಿಯು ಈ ತಾಲೂಕಿನ ಗಡಿಭಾಗದಲ್ಲಿ ದಕ್ಷಿಣದಿಂದ ಪೂರ್ವಕ್ಕೆ ಹರಿದು ರಾಜೊಳ್ಳಿ ಚೆಕ್ ಡ್ಯಾಂ ಮುಂದೆ ಆಂಧ್ರಪ್ರದೇಶ ಕರ್ನೂಲ್ ಮಂತ್ರಾಲಯ

ಮುಂತಾದ ಪ್ರದೇಶಗಳಲ್ಲಿ ಹರಿದು ಕೊನೆಗೆ ಕೃಷ್ಣ ನದಿಯನ್ನು ಸೇರುತ್ತದೆ. ಮಾನ್ವಿ ತಾಲೂಕಿನ ಕೆಲವು ಗ್ರಾಮಗಳೂ ಈ ನದಿಯ ದಂಡೆಯಲ್ಲಿದ್ದು ನೀರಾವರಿ ಸೌಲಭ್ಯವನ್ನು ಪಡೆಯುತ್ತವೆ. ಯೋಗ್ಯವಾದ ಆ ಗ್ರಾಮಗಳೆಂದರೆ ಎಡಿವಾಳ ಚಿಕಲಪರ್ವಿ, ಮದ್ಲಾಪುರ, ಪದ್ದಲಿಪನ್ನೂರು, ದದ್ದಲ, ಜೊಕುರು, ರಾಜೊಳ್ಳಿ, ಆರ್ನಳ್ಳಿ, ಮಳ್ಳಿ ರಾಜುಬಂಡಾ ಕೃಷಿ ಇಲಾಖೆಗಳು ಮತ್ತು ಜನ ಪ್ರತಿನಿಧಿನಿಗಳು ಸರ್ಕಾರಕ್ಕೆ ಮಾನ್ವಿ ತಾಲೂಕಿನ ಕೃಷಿ ಅಭಿವೃದ್ಧಿಯ ಬಗ್ಗೆ ಒತ್ತುಕೊಟ್ಟು ಈ ನದಿಯಿಂದ ಸುಮಾರು ೫ಕಿ.ಮೀ.ಗಳವರೆಗೆ ಬಳಸಲು ಸಾಧ್ಯವಾಗುವಂತಹ ಏತ ನೀರಾವರಿ ಯೋಜನೆಯನ್ನು ಕೈಗೆತ್ತಿಕೊಳ್ಳುವಂತೆ ಮತ್ತು ರೈತರು ಸ್ವತಃ ಏತ ನೀರಾವರಿ ಮಾಡಿಕೊಳ್ಳಲು ಮುಂದೆ ಬಂದಾಗ ಅದಕ್ಕೆ ಸೂಕ್ತವಾದ ಸೌಲಭ್ಯಗಳನ್ನು ಒದಗಿಸುವಂತೆ ಸರ್ಕಾರದ ಮೇಲೆ ಒತ್ತಡ ತಂದು ಕೆಲಸ ಮಾಡಿಕೊಳ್ಳುವಂತ ಪ್ರಯತ್ನ ಮಾಡಬೇಕಾಗಿದೆ. ಈ ನದಿಯು ಹಂಪಿ ಕ್ಷೇತ್ರದಿಂದ ಹರಿದು ಬರುತ್ತದೆ.

ಈ ತಾಲೂಕಿನ ಪ್ರತಿಯೊಂದು ಊರುಗಳಲ್ಲಿ ಹಳೆಯ ಬಾವಿಗಳು ಕಂಡು ಬರುತ್ತವೆ. ಅವುಗಳಿಗೆ ಊರಿನವರು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಉದಾ: ಮಾನ್ವಿಯಲ್ಲಿ ಜೋಡನ ಬಾವಿ ಇದನ್ನು ಕಟ್ಟಿಸಿದಕ್ಕೆ ೭ ಶಿಲಾ ಶಾಸನಗಳು ದೊರೆಯುತ್ತವೆ. ಇದರಲ್ಲಿ ೫ ಬಾವಿಗಳನ್ನು ಗವುಡ ದುಪದ ತಿಮಯ್ಯ ಕಟ್ಟಿಸಿದ್ದರೆ ಅದೇ ಸ್ಥಳದಲ್ಲಿರುವ ಬಾವಿಯ ಗೋಡೆಯ ಮೇಲಿನ ಶಾಸನದಿಂದ ರಾಣಿವಾರನಾಗಿದ್ದ ಸೇಕ ನಿಜಾಮ ಮುಜುಮದಾರನು ಮುದೋಪ ನಿಘಾವಾನ, ನಾರಪ, ಸಕಿನೋಜಿತ್ ಸಬನೀಸ ಅಂತಪಗಳು ಆಳುತ್ತಿದ್ದಾಗ ಸೋಪಾನವನ್ನು (ಮೆಟ್ಟಿಲು, ಪಾವಟಿಗೆ) ಕಟ್ಟಿಸಿದಕ್ಕೆ ಹೇಳಿದೆ. ಕುರುಕುಂದಿಯಿಲ್ಲಿ ದೊರೆತಿರುವ ಶಾಸನವು ಬಾವಿಯನ್ನು ಕಟ್ಟಿಸಿದಕ್ಕೆ ಸಂಬಧಿಸಿದೆ. ಬಾವಿ ಕಟ್ಟಿಸಿದಕ್ಕೆ ದುಪದ ತಿಂಮಯನು ನಾಮು ಕೊಟ್ಟಿದ್ದನ್ನು ತಿಳಿಸುತ್ತದೆ. ಈ ನಾಮು ಎನ್ನುವ ಉರ್ದು ಶಬ್ದವು ಆಗಿನ ನಿಜಾಮರ ಆಳ್ವಿಕೆಯ ಕುರಿತು ತಿಳಿಸುತ್ತದೆ. ಇವುಗಳಲ್ಲದೆ ಶಾಸನಾಧಾರಗಳಲ್ಲಿ ಬಾವಿಗಳು ಬಹಳಷ್ಟು ಕಮಡುಬರುತ್ತದೆ. ಊರು ಬಾವಿಗಳು, ಉಪ್ಪು ನೀರಿನ ಬಾವಿಗಳು, ಸಿಹಿನೀರಿನ ಬಾವಿಗಳು, ವೃತ್ತಿ ಇಲ್ಲವೆ ಮನೆತನಗಳ ಹೆಸರುಗಳಿಂದ ಕರೆಯುವ ಬಾವಿಗಳು ಇವೆ.

## ಬೆಟ್ಟಗಳು

ಈ ತಾಲೂಕಿನ ಕೆಲವು ಗ್ರಾಮಗಳಲ್ಲಿ ಬೆಟ್ಟ-ಗುಡ್ಡ, ಕುಂಟೆ, ದಿನ್ನೆಗಳನ್ನು ಕಾಣಬಹುದು. ಅಂತಹಗ್ರಾಮಗಳೆಂದರೆ ಮಾನ್ವಿಗುಡ್ಡ, ಕರೆಗುಡ್ಡ, ಕವಿತಾಳ ಸಿರಿವಾರ, ನಮಲಕಲ್, ಗವಿಗಟ್ಟ, ಜಾನೆಕಲ್, ನಕ್ಕುಂದಿ, ಬೆಟ್ಟಮಾರು, ಬ್ಯಾಗವಾಟ, ಒಗಲವಾಡ, ಕಲ್ಲೂರು, ಬಾದರದಿನ್ನಿ, ನೀರಮಾನ್ವಿ, ರಬ್ಬಣಕಲ್, ಇನ್ನೂ ಕೆಲವು ಗ್ರಾಮಗಳಲ್ಲಿ ಕಾಣಸಿಗುತ್ತವೆ. ಇವುಗಳಲ್ಲಿ ಮಾನ್ವಿಗುಡ್ಡ, ಕರೆಗುಡ್ಡ, ಕರಡಿಗುಡ್ಡ, ಕಲ್ಲೂರು ಗುಡ್ಡಗಳು ಅತ್ಯಂತ ಎತ್ತರವಾಗಿದ್ದು ಅವುಗಳಲ್ಲಿ ಬೆಲೆಬಾಳುವ ಗಿಡಮೂಲಿಕೆಗಳು ಮತ್ತು ತಾಮ್ರ ಚಿನ್ನದ ನಿಕ್ಷೇಪಗಳು ದೊರೆಯುತ್ತವೆ. ಗಣಿಗಾರಿಕೆಗೆ ಅನುಕೂಲಕರವಾದ ಕಣಶೀಲೆ ಗುಡ್ಡಗಳು ಇವೆ. ಕೆಲವು ಕೆಡೆ ಸಮತಟ್ಟಾದ ಭೂಪ್ರದೇಶವಿದ್ದರೆ ಇನ್ನು ಕೆಲವು ಕಡೆ ಇಳಿಜಾರು ಮತ್ತೊಂದೆಡೆ ದಿನ್ನೆ ಕೆಲವು ಗ್ರಾಮಗಳು ಗುಡ್ಡಗಳಿಂದ ಆವೃತ್ತವಾಗಿದೆ. ಅಂತವುಗಳಲ್ಲಿ ಆದಿ ಮಾನವನ ನೆಲೆಗಳು ಕುತುಹಲಗಳು ದೊರೆತಿವೆ.

## ಮಾನ್ವಿ ಗುಡ್ಡ

ಇದು ಮಾನ್ವಿ ಪಟ್ಟಣದ ದಕ್ಷಿಣದ ಭಾಗದಲ್ಲಿ ಅಡ್ಡ ಗೋಡೆಯಂತೆ ಭಾಸವಾಗುತ್ತದೆ. ಆಗ್ನೇಯ ಭಾಗದ ಕೊನೆಯಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ಇದರ ಅಕ್ಕ ಪಕ್ಕ ೫ ಬಾವಿಗಳಿದ್ದು ಸದಾ ಕಾಲ ನೀರಿನಿಂದ ತುಂಬಿರುತ್ತದೆ. ಅಲ್ಲದೆ ಸಿಹಿನೀರು ಇರುವುದರಿಂದ ಕುಡಿಯಲು ಜನರು ಬಳಕೆ ಮಾಡುತ್ತಾರೆ. ಇವುಗಳಿಗೆ ಇಲ್ಲಿನ ಜನ ಜೋಡನ ಬಾವಿ ಎಂದು ಕರೆಯುತ್ತಾರೆ. ಇವುಗಳಲ್ಲಿ ಬಸಿಯುವ ನೀರು ಸಣ್ಣ ಪ್ರಮಾಣದ ಝುರಿಯಾಗಿ ದಿಡ್ಡಿ ಕೆರೆಗೆ ಹರಿಯುತ್ತದೆ. ಬೇಸಗೆಯಲ್ಲಿ ಮಲ್ಲಿಕಾರ್ಜುನ ಜಾತ್ರೆಯಾಗುತ್ತದೆ. ಗುಡ್ಡದ ದೊಡ್ಡ ದೊಡ್ಡ ಗಾತ್ರದ ಬಂಡೆಯ ಕೆಳಭಾಗದಲ್ಲಿ ಆದಿಮಾನವ ಬಿಡಿಸುರುವ ಚಿತ್ರಗಳು ಕಂಡು ಬರುತ್ತವೆ. ಇದೇ ಸ್ಥಳಗಳಲ್ಲಿ ೭ ತ್ರುಟಿತ ಶಾಸನಗಳು ಬಾವಿ ಕಟ್ಟಿಸಿದ್ದಕ್ಕೆ ಮೆಟ್ಟಿಲು ಕಟ್ಟಿಸಿದಕ್ಕೆ ಸಂಬಂಧಿಸಿವೆ. ಇವುಗಳನ್ನು ಊರು ಗ್ರಾಮದವರು ಹಾಕಿಸಿರುತ್ತಾರೆ. ಗುಡ್ಡದ ಕೆಳಭಾಗದಲ್ಲಿ ದಿಡ್ಡಿ ಕೆರೆ ಇದ್ದು ದಡದಲ್ಲಿ ಹನುಮಂತನ ದೇವಾಸ್ಥಾನವಿದೆ. ಇದರ ಮುಂದೆ ಶಾಸನವನ್ನು ನೆಡಲಾಗಿದೆ. ಗುಡ್ಡದ ಮಧ್ಯದಲ್ಲಿ ದಾರಿ ಇದ್ದು ಇದು ಹನುಮಯ್ಯ ತಾತಾನ ನೆಲೆಸಿರುವ ಸ್ಥಳಕ್ಕೆ ಹೋಗುವುದರಿಂದ ಇದನ್ನು ಹನುಮಯ್ಯ ತಾತಾನ ಗುಡ್ಡ ಎಂದು ಕರೆಯುತ್ತಾರೆ. ಇಲ್ಲಿಯೆ ಪಕ್ಕದ ಗುಡ್ಡದಲ್ಲಿ ಹಜರತ್ ಪರಿಮುದ್ದೀನ ಎನ್ನುವ ಮುಸ್ಲಿಂ ಸಂತನ ದರ್ಗಾವಿದೆ. ಮೇಲ್ಭಾಗದಲ್ಲಿ ಸುಂದರವಾದ ವೃತ್ತಾಕಾರದ ಕೋಟೆ ಇದೆ. ಇದನ್ನು ಇತ್ತೀಚೆಗೆ ಪುನಶ್ಚೇತನಗೊಳಿಸಲಾಗಿದೆ. ಇದರ ಕೆಳಭಾಗದಲ್ಲಿ ಮೊದಲು ಹಿಂದೂ ದೇವಾಲಯವಿದ್ದು ಈಗ ಇದು ಮುಸ್ಲಿಂ ಸಂತನ ಗೋರಿಯಾಗಿ ಪರಿವರ್ತಿತವಾಗಿದೆ. ಈ ಗುಡ್ಡದ ಸುತ್ತಲೂ ಕೋಟಿ ಇದ್ದು ಈಶಾನ್ಯ ಭಾಗದಲ್ಲಿ ಹೊಕ್ರಾಣಿ ಕೆರೆ ಇದೆ. ಈ ಕೆರೆಯಲ್ಲಿ ತೆಲಗು ಮೂಲದ ಕನ್ನಡ ಅಕ್ಷರಗಳಿರುವ ಗುಂಡು ಕಲ್ಲಿನ ಮೇಲೆ ಶಾಸನವನ್ನು ಕೊರೆಯಿಸಲಾಗಿದೆ. ಇದಲ್ಲದೆ ಕುಡಿಯುವ ನೀರಿನ ಗಿರಕಿ ಬಾವಿ ಕೂಡ ಕೆರೆಯಲ್ಲಿರುವುದು ಮತ್ತು ಬಳಕೆಯಾಗುತ್ತಿರುವುದು ವಿಶೇಷ. ಪಟ್ಟಣದ ಮಧ್ಯದಲ್ಲಿ ಜಗನ್ನಾಥ ದೇವಾಲಯವಿದೆ ಸಮೀಪದಲ್ಲಿಯೇ ಕೋಟೆಯ ಪ್ರವೇಶ ದ್ವಾರವಿದ್ದು  ಇಲ್ಲಿ ಜನರು ನಿವೇಶನಗಳನ್ನು ಹೊಂದಿದ್ದಾರೆ. ಈ ಮೊದಲು ಅಲ್ಲಿಯ ಜನರನ್ನು ಕೋಟೆಯಿಂದ ಹೊರ ಹಾಕಿದ್ದರು ಹಿಂದುಳಿದವರು ಕಟುಕರು ವಾಸಮಾಡುತ್ತಿದ್ದಾರೆ. ಹೋಕ್ರಾಣಿ ಕೆರೆಯಲ್ಲಿ ನಿಂತು ನೋಡಿದರೆ ಕೋಟೆಯ ವಿಹಂಗಮ ನೋಟ ಕಾಣಿಸುತ್ತದೆ. ಈ ಬೆಟ್ಟದ ಮೇಲೆ ನಿಂತು ನೋಡಿದರೆ ದಕ್ಷಿಣ ಭಾಗದಲ್ಲಿ ಹರಿಯುವ ಚಿಕಲಪರ್ವಿ ತುಂಗಭದ್ರಾ ಹೊಳೆಯು ಕಣ್ಮನವನ್ನು ಸೆಳೆಯುತ್ತದೆ. ಗುಡ್ಡದ ಉತ್ತರ ದಿಕ್ಕಿಗೆ ಮಾನ್ವಿ ಪಟ್ಟಣ ವಿಸ್ತಾರವಾಗಿ ಹಬ್ಬಿಕೊಂಡಿದೆ.

## ಕಲ್ಲೂರು ಗುಡ್ಡ

ಕಲ್ಲೂರು ಮಾನ್ವಿ ತಾಲೂಕಿನಿಂದ ಈಶಾನ್ಯಕ್ಕೆ ೨೫ಕಿ.ಮೀ. ದೂರದಲ್ಲಿದೆ. ಅಕ್ಷಾಂಶ ೧೬°೬ ರೇಖಾಂಶ ೭೭°೮ ರಲ್ಲಿವೆ. ಊರಲ್ಲಿರುವ ಗುಡ್ಡ ಕಲ್ಲಿನಿಂದ ಆವೃತ್ತವಾಗಿರುವುದರಿಂದ ಇದಕ್ಕೆ ಕಲ್ಲೂರು ಎಂದು ಹೆಸರು ಬಂದಿದೆ. ಇಲ್ಲಿ ಶಿಲಾ, ತಾಮ್ರಯುಗದಷ್ಟು ಹಳೆಯದಾದ ಮಾನವನ ನೆಲೆಗಳು ನಿಕ್ಷೇಪಗಳು ತಾಮ್ರದ ಉದ್ಧವಾದ ೩ ಕತ್ತಿಗಳು ಇಲ್ಲಿ ದೊರೆತಿವೆ. ಆರನೇ ವಿಕ್ರಮಾದಿತ್ಯನು

ಕ್ರಿ.ಶ.೧೧೯೬ರಲ್ಲಿ ನರ್ಮದಾ ನದಿಯ ದಂಡೆಯ ಮೇಲೆ ಸೈನಿಕ ಶಿಬಿರದಲ್ಲಿದ್ದಾಗ ಪಂಚಲಾಂಗುಕ್ರತುವನ್ನು ಮಾಡುವ ಸಂದರ್ಭದಲ್ಲಿ ಕಲ್ಲೂರನ್ನು ದಂಡನಾಯಕ ವಿಕ್ರಮಾದಿತ್ಯ ಚಟ್ಟೋಪಾದ್ಯಾಯ ಸರ್ವಕ್ರತು ಸೋಮಯಾಜಿಗೆ ದಾನವಾಗಿ ಕೊಟ್ಟನು ಹೀಗೆ ಇತರರ ಆಳ್ವಿಕೆಗೆ ಈ ಊರು ಒಳಪಟ್ಟಿತ್ತು ೧೩-೧೪ನೇ ಶತಮಾನದಲ್ಲಿ ಒಂದು ಕೋಟೆಯನ್ನು ಕಟ್ಟಲಾಗಿದ್ದು ಇವತ್ತಿಗೂ ಅದು ಸ್ವಲ್ಪಭಾಗ ಬಿದ್ದಿರುವುದು ಕಂಡು ಬರುತ್ತದೆ. ಮುಸ್ಲಿಂ ಅರಸರ ಕಾಲದಲ್ಲಿ ಈ ಕೋಟೆಗೆ ೫ ಬಾಗಿಲುಗಳನ್ನು ಆಳವಡಿಸಲಾಗಿತ್ತು ಬೆಟ್ಟದ ಪೂರ್ವದಲ್ಲಿ ಊರಿದ್ದು ಊರಿನ ಎರಡು ಪಾರ್ಶ್ವಗಳಲ್ಲಿ ಗುಡ್ಡಗಳು ಆವರಿಸಿಕೊಂಡಿದೆ. ಒಟ್ಟು ೫ ಗುಡ್ಡಗಳು ಈ ಊರಿಲ್ಲಿ ಕಾಣಸಿಗುತ್ತವೆ. ಗುಡ್ಡದಲ್ಲಿ ಅಪೂರ್ವವಾದ ಗಿಡಮೂಲಿಕೆಗಳು, ನಿಕ್ಷೇಪಗಳು ದೊರಕುತ್ತವೆ. ಈ ಊರಲ್ಲಿ ಪ್ರಾಚೀನ ಕಾಲದ ದೇವಾಲಯಗಳಿದ್ದು ಪ್ರಸಿದ್ಧಿಯನ್ನು ಹೊಂದಿದೆ. ಮಾರುತೇಶ್ವರ ದೇವಾಲಯ ವರಮಹಾಲಕ್ಷ್ಮಿ ದೇವಾಲಯ ಅಡಲು ಸಿದ್ಧೇಶ್ವರ ಇದಲ್ಲದೆ ಮಾರೆಮ್ಮನ ಜಾತ್ರೆಯೂ ಕೂಡ ಜರುಗುತ್ತದೆ. ಕಾರ ಹುಣ್ಣಿಮೆ ದಿನ ಎತ್ತುಗಳ ಕರಿಹರಿದ ಮೇಲೆ ಜನರು ಬೆಟ್ಟದ ತುದಿಗೆ ಹೋಗಿ ಅಲ್ಲಿ ಬೆಳೆದಿರುವ ಗಿಡದ ಕೊಲ್ಲೆಗಳನ್ನು ಮುರಿದು ಮನೆಯ ಜಂತೆಯಲ್ಲಿ ಸಿಕ್ಕಿಸುವುದು ವಾಡಿಕೆ ಇದೆ. ಇದೇ ರೀತಿಯಾಗಿ ಕುರುಕಂದ, ವಟಗಲ್, ಸಿರಿವಾರಗಳಲ್ಲೂ ಕಾಣುತ್ತೇವೆ.

## ೨.೨. ಮಾನ್ವಿಯ ಪದ ನಿಷ್ಪತ್ತಿ ಮತ್ತು ಸ್ಥಳನಾಮಗಳು

ಮಾನ್ವಿಯ ಕುರಿತಾದ ಉಲ್ಲೇಖ ಮೊದಲ ಬಾರಿಗೆ ಹಿರೇಕೊಟೆಕಲ್ ಶಾಸನದಿಂದ 'ಮಾನುವೆ'ಯ ಎಂದು ತಿಳಿದು ಬರುತ್ತದೆ. ರಾಯಚೂರು ಕೋಟೆಯೊಳಗೆ ಕಾಕತೀಯರಸ ರುದ್ರದೇವನ ಕಾಲದ ನಿಲ್ಲಿಸಿರುವ ಶಾಸನದ ಮೂಲಕ 'ಮಾನುವ' ಎಂದು ವಿಜಯ ನಗರ ಅರಸರ ಕಾಲದ ಚಿಕಲಪರ್ವಿ ಶಾಸನದಿಂದ 'ಮಾನ್ವಿ'ಯ ಉಲ್ಲೇಖ ದೊರೆಯುತ್ತದೆ. ಮಾನ್ವಿಯ ಜೋಡನ ಬಾವಿ ಕಟ್ಟಡದ ಗೋಡೆಗೆ ಸೇರಿಸಿರುವ ಶಾಸನದ ಮೂಲಕ ಮಾನುವೆಯ ಎಂದು ಇದೇ ಪಟ್ಟಣದ ಹೊಕ್ರಾಣಿ ಕೆರೆಯಲ್ಲಿರುವ ತೆಲುಗು ಭಾಷೆಯ ಕನ್ನಡ ಲಿಪಿಹೊಂದಿದ ಗುಂಡು ಕಲ್ಲಿನ ಮೇಲಿನ ಶಾಸನದ ಮೂಲಕ ಮಾನುವ ಎಂದು ಉಲ್ಲೇಖಿಸಿರುವ ಶಾಸನದ ಮೂಲಕ ಹಿಂದೆ ಮಾನ್ವಿಯನ್ನು ಮಾನುವೆಯ, ಮಾನುವ, ಮಾನ್ವಿಯ ಮನುವೆಯ, ಮಾನವೆ ಎಂಬ ಹೆಸರಿನ ಮೂಲಕ ಇಂದು ಜನರಾಡುವ ಭಾಷೆಯಲ್ಲಿ ಮಾನ್ವಿ ಒಂದು ತಾಲೂಕು ಪಟ್ಟಣವಾಗಿದೆ.

ಶಾಸನಗಳ ಮೂಲಕ ತಿಳಿದುಬರುವ ಗ್ರಾಮಗಳೆಂದರೆ ರೂಡಿ ಎನ್ನುವ ಗ್ರಾಮ ಈಗಿನ ಕುರುಡಿ ಮೊರಟ ಈಗಿನ ಮಲ್ಲಟ, ಗೋರಿಕುಲ್ಲು-ಗೋರ್ಕಲ್ಲು, ಕೊಟ್ಟುಕುಣೆಹೆ ಈಗಿನ ಕೊಟ್ನೆಕಲ್, ಒಳನಿಟ್ಟಗೆ-ಬಲ್ಲಟಗಿ, ಬಾಗುಲಪಳಲ-ಬಾಗಲವಾಡಗಳಾಗಿ ಗ್ರಾಮ ನಾಮಗಳು ಬದಲಾಗಿ ಚಾಲ್ತಿಯಲ್ಲಿರುವುದನ್ನು ಕಾಣಬಹುದು.

### ಸ್ಥಳನಾಮಗಳು

ಮಾನವಿ ತಾಲೂಕಿನ ಸ್ಥಳನಾಮಗಳು ಆ ಪ್ರದೇಶದ ಸಂಸ್ಕೃತಿಯ ದ್ಯೋತಕವಾಗಿವೆ. ಅಚ್ಚಗನ್ನಡದ ಪದಗಳು ಇವುಗಳ ಪ್ರಮುಖ ಲಕ್ಷಣವಾಗಿವೆ. ಸಂಸ್ಕೃತ-ತೆಲಗು-ಉರ್ದು ಭಾಷೆಗಳ ಪ್ರಭಾವ ಇಲ್ಲಿಯ

ಸ್ಥಳನಾಮಗಳಲ್ಲಿ ಪ್ರಭಾವ ಬೀರಿವೆ. ಅನ್ಯಭಾಷಾ ಒತ್ತಡದಿಂದ ಜನಪದರ ಸೌಲಭ್ಯಕಾಂಕ್ಷಿತ್ವದಿಂದ ಮತ್ತು ಕಾಲಾಂತರ ಭೇದಗಳಿಂದ ಕನ್ನಡದ ಮೇಲು ರೂಪಗಳು ವ್ಯತ್ಯಾಸಗೊಂಡಿವೆ[2].

### ದಿನ್ನಿ (ದಪ್ಪ)

ದಿನ್ನೆ ಎಂದರೆ ಮಣ್ಣಿನ ಗುಡ್ಡೆ ವಿಶಾಲವಾಗಿ ಹರಡಿಕೊಂಡ ಎತ್ತರದ ಪ್ರದೇಶವೆಂದು ಇದರ ಅರ್ಥ ದ್ರಾವಿಡ ಭಾಷೆಯ ಮೇಲು ರೂಪ 'ದಿಣ್ಣೆ' ಪದ ಅದು 'ದಿನ್ನೆ – ದಿನ್ನಿ' ಎಂದಾಗಿದೆ. ಇಂತಹ ದಿನ್ನಿ ಪದಗಳನ್ನು ಕೊನೆಗೊಂಡ ಸ್ಥಳನಾಮಗಳು ಈ ತಾಲೂಕಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಉದಾ: ಗಾರಲದಿನ್ನಿ, ಖರಾಬದಿನ್ನಿ, ಗಣದಿನ್ನಿ, ಗೊಲ್ದನ್ನಿ, ಬಾದರದಿನ್ನಿ, ಚಿಕ್ಕದಿನ್ನಿ, ಜಕ್ಕಲದಿನ್ನಿ, ಜಂಬಲದಿನ್ನಿ, ಗುಡದಿನ್ನಿ, ನಾಗರದಿನ್ನಿ, ಲಕಮದಿನ್ನಿ, ವಲಕಮದಿನ್ನಿ, ರಾಜಲದಿನ್ನಿ, ಸಿಂಗಡದಿನ್ನಿ, ತೋರಣದಿನ್ನಿ, ಮುಂತಾದವುಗಳನ್ನು[3] ಗಮನಿಸಬಹುದು.

### ವಟ–ವಾಟ

ವಟ–ವಾಟ ಇವು ಶುದ್ಧ ಕನ್ನಡದ ಪದಗಳು. ವಟ ಶಬ್ದಕ್ಕೆ ತೋಟವೆಂಬ ಅರ್ಥವಿದೆ. ವಾಟ ಪದಕ್ಕೆ ಇಳಿಜಾರು ಪ್ರದೇಶ ಎಂಬ ಅರ್ಥವಿದೆ. ತೋಟ ಇಲ್ಲವೆ ಇಳಿಜಾರು ಪ್ರಾದೇಶಿಕವಾಗಿ ಸೂಚಿಸುವ ಸ್ಥಳನಾಮಗಳು ಇಲ್ಲಿಕಾಣಸಿಗುತ್ತದೆ. ಉದಾ: ಬ್ಯಾಗವಾಟ, ಬೆಳವಟ, ವಡವಾಟ ಮುಂತಾಗಿ[4] ಕಾಣಬಹುದು.

### ಪುರ

ಪುರ ಎನ್ನವು ಪದದಿಂದ ಕೊನೆಗೊಳ್ಳುವ ಊರುಗಳ ಹೆಸರುಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಉದಾ: ಮಲ್ಕಾಪುರ, ದೇವಿಪುರ, ತಮ್ಮಾಪುರ, ಪುಸಾಪುರ, ಹಾಲಾಪುರ, ಸೈದಾಪುರ, ಬುಳ್ಳಾಪುರ, ಮುರಾನಪುರ, ಜಾಲಾಪುರ ಇನ್ನೂ ಮುಂತಾದವು.

### ಪರ್ವಿ–ಪರವಿ

ಈ ಪದಗಳು ಮೂಲತಃ ಆಂದ್ರದ ಗಡಿ ಭಾಗವಿದಲ್ಲಿ ತೆಲಗು ಭಾಷೆಯ ಪ್ರಭಾವ ಕಂಡು ಬರುತ್ತದೆ. ವಿಜಯನಗರ ಅರಸರ ಕಾಲದ ಶಾಸನಗಳಲ್ಲಿ ಮತ್ತು ಕಾಕತೀಯ ಅರಸರ ಕಾಲದಿಂದ ತೆಲುಗು ಭಾಷೆಯ ಪ್ರಭಾವವಿರುವುದು ಕಂಡುಬರುತ್ತದೆ. ಉದಾ: ಚೀಕಲಪರವಿ, ಯಪಲಪರವಿ ಪೋತನಾಳು ಮತ್ತು ಮರ್ಚೇಡ್ ಊರುಗಳ ಹೆಸರುಗಳು ಕೂಡ ತೆಲುಗು ಭಾಷೆಗೆ ಸಂಬಂಧಿಸಿವೆ.

### ದೊಡ್ಡಿ–ಹಟ್ಟಿ

ತೆಲುಗು ಮೂಲದ ದೊಡ್ಡಿಪದ ಕನ್ನಡದ ಹಟ್ಟಿ ಶಬ್ದಕ್ಕೆ ಸಮನಾಗಿದೆ. ದನಕರುಗಳನ್ನು ಕಟ್ಟುವ ಸ್ಥಳಕ್ಕೆ ದೊಡ್ಡಿಯಂತಾಯಿತು. ಇದಲ್ಲದೆ ಬಣವೆಗಳು ಇರುವ ಸ್ಥಳಗಳಿಗೂ ಕೂಡ ದೊಡ್ಡಿ ಎಂದು ಕರೆಯುವ ವಾಡಿಕೆ ಇದೆ. ಇಂತಹ ಸ್ಥಳನಾಮಗಳು ಇರುವ ಊರುಗಳು ಕಂಡುಬರುತ್ತವೆ.

ಉದಾ: ಕಸನದೊಡ್ಡಿ, ಗೋವಿನದೊಡ್ಡಿ, ಬೊಮ್ಮನದೊಡ್ಡಿ, ಪಟಕಮದೊಡ್ಡಿ, ಯದ್ದಲದೊಡ್ಡಿ, ಜಂಗಮರಹಟ್ಟಿ (ಜಂಗರ್ಹಳ್ಳಿ), ಒಡ್ಡರಹಟ್ಟಿ.

### ಕಲ್-ಗುಡ್ಡ-ಬೆಟ್ಟ-ಬಂಡೆ

ಇವು ಶಿಲೆಗೆ ಸಂಬಂಧಿಸಿದ ಪದಗಳು. ಮಾನವನು ನೆಲೆ ನಿಲ್ಲುವುದಕ್ಕೆ ಮತ್ತು ಅವನ ಬದುಕಿನ ಭದ್ರತೆಗಳಿಗೆ ಇವು ಪ್ರಮುಖ ಅಂಗಗಳಾಗಿವೆ. ಕಲ್-ಗುಡ್ಡ-ಬೆಟ್ಟ-ಬಂಡೆಗಳುಳ್ಳ ಸ್ಥಳನಾಮಗಳಲ್ಲಿ ಈ ಅರ್ಥ ವಿಶೇಷತೆಗಳು ಕಂಡುಬರುತ್ತದೆ. ಆನಂದಗಲ್, ಕಪಗಲ್, ಗೋರ್ಕಲ್, ಕೊಟ್ನಕಲ್, ಜಾನೇಕಲ್, ರಬ್ಬಣಕಲ್, ಇತ್ಯಾದಿ ಮಲ್ಲದಗುಡ್ಡಮ, ಕರೆಗುಡ್ಡ, ಬೆಟದೂರು ನಮಲಕಲ್ ಮತ್ತು ಮಲ್ಲದಗುಡ್ಡಗಳಲ್ಲಿ ನವಿಲು ಮತ್ತು ಮೊಲ ಪ್ರಾಣಿ ಪಕ್ಷಿಗಳು ಅಡಗಿವೆ. ದೋತರಬಂಡಿ, ರಜಲಬಂಡೆ ಬಂಡೆಯು ದೋತರದಂತೆ ವಿಶಾಲವಾಗಿ ಹರಡಿಕೊಂಡ ಪ್ರದೇಶವಾಗಿದೆ. ಇಂದಿನ ಆನೆಗುಂದೆಯಲ್ಲಿ ಬಂಡೆಯೊಂದಕ್ಕೆ ಸೀತೆಸೆರಗು ಹೆಸರು ಇರುವಂತೆ ಈ ಪದಬಳಕೆಗಲ್ಲಿ[೫] ಇರುವುದನ್ನು ಕಾಣಬಹುದು.

### ಅಮರಾವರಿ-ಬೇಗಾವತಿ

ಬೋಗ ಮತ್ತು ವೈಭವಗಳ ಸಂಕೇತಗಳಾದ ಈ ಎರಡು ನಗರಗಳು ಹೆಸರುಗಳನ್ನು ಊರುಗಳಿಗೆ ಕರೆದು, ಸ್ವರ್ಗಲೋಕ, ಪಾತಾಳ ಲೋಕಗಳೆರಡನ್ನು ಭೂಲೋಕದಲ್ಲಿ ಸ್ಥಾಪಿಸುವ ಪೌರಾಣಿಕ ಕಲ್ಪನಾ ಶಕ್ತಿ ಇಲ್ಲಿದೆ. ಮಾನ್ವಿತಾಲೂಕಿನಲ್ಲಿ ಈ ಎರಡು ಹೆಸರಿನ ಸ್ಥಳನಾಮಗಳಿವೆ[೬].

### ವಿಶೇಷ ನಾಮಗಳು

ಒಂದು ಜನಾಂಗದ ಸಂಸ್ಕೃತಿ ಉಧಾತ ವಿಚಾರ ಸೌಂದರ್ಯ ಪ್ರಜ್ಞೆ ಮತ್ತು ಮಹೋನ್ನತ ಜೀವನ ಮೌಲ್ಯಗಳು ಸ್ಥಳನಾಮಗಳು ವಿಶ್ಲೇಷಣೆಯಿಂದ ತಿಳಿಯುತ್ತದೆ. ಅಂತಹ ವಿಶೇಷಾರ್ಥಗಳ ನಾಮಗಳು ಮಾನ್ವಿ ತಾಲೂಕಿನ ಜನರ ಬದುಕನ್ನು ಅನಾವರಣಗೊಳಿಸುತ್ತದೆ. ಜೋಳದರಾಶಿ, ಪನ್ನೂರು, ಜೌಗಬಾವಿ, ತುಪ್ಪದೂರು, ಹಾಲಾಪುರ, ಕಡಬೂರು, ತೋರಣದಿನ್ನಿ ಮುಂತಾದವು ಹೊನ್ನು, ತ್ಯಾಗ, ತುಪ್ಪ, ಹಾಲು, ಕಡುಬು ಮತ್ತು ತಳಿರುತೋರಣದ ಪದಗಳು ಬದುಕಿನ ಸಮೃದ್ಧಿಯನ್ನು ತೋರಿಸುತ್ತವೆ[೭].

ಮಾನವ ತನ್ನ ಇರುವಿಕೆಯನ್ನು ಬಂಡೆಗಳ ಮೇಲೆ, ಗುಹೆಗಳ ಒಳಭಾಗದಲ್ಲಿ ತಾನು ವಾಸಿಸುವ ಸ್ಥಳಗಳಲ್ಲಿ ಚಿಹ್ನೆಗಳ ಮೂಲಕ, ತಾನು ದಿನ ನಿತ್ಯ ಬಳಸುತ್ತಿದ್ದ ಆಯುಧಗಳ ಚಿತ್ರಗಳು ಪ್ರಾಣಿ ಪಕ್ಷಿ ಸಂಕೇತಗಳು ತನ್ನ ಉಡುಗೆ ತೋಡುಗೆಗಳನ್ನು ವಸ್ತುಗಳನ್ನು ಚಿತ್ರದ ಮೂಲಕ ಕೊರೆದು-ಬರೆದು ಮುಂದೆ ಚೌಕಾಕಾರದ ಅಕ್ಷರಗಳಿಗೆ ಮೂಲ ಪ್ರೇರಣೆಯಾದರು. ಮುಂದಿನ ಪೀಳಿಗೆಯವರಿಗೆ ಅತ್ಯಮೂಲ್ಯವಾದ ಮಾಹಿತಿಯನ್ನು ಬಿಟ್ಟಿದ್ದಾರೆ. ಅಜ್ಞಾನದಿಂದ ಜ್ಞಾನದ ಕಡೆ ಸಾಗಿರುವುದು ಆದಿಮಾನವ ಯುಪ ಯುಗದ ಇತಿಹಾಸ ಪರಿಚಯ ಮಾಡಿಕೊಡಲಿಕ್ಕೆ ಸಾಧ್ಯವಾಗಿದೆ.

ಈ ದೃಷ್ಟಿಯಿಂದ ನೋಡಿದಾಗ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿ ಆದಿ ಮಾನವನ ನೆಲೆಗಳು ಬೃಹತ್ ಶಿಲಾಯುಗದ ಕೆಲವು ಅವಶೇಷಗಳು ಕಂಡುಬಂದಿವೆ. ಕಮಲಾಟ, ಕರಿಗುಡ್ಡ, ನವಿಲುಕಲ್ಲು, ವಟಗಲ್ಲು, ಕವಿತಾಳದಲ್ಲಿ ಈ ಸಂಸ್ಕೃತಿಯ ಕಲ್ಮನೆ ಕಲ್ಲುಗುಪ್ಪೆ ಹಾಗೂ ಶಿಲಾವೃತ್ತಗಳ ದೊರೆತಿವೆ. ಜುಕೂರಿನಲ್ಲಿ ಗೋರಿನೆಲೆಗಳು ಕಲ್ಲುಗಪ್ಪೆಯ ಶಿಲಾವೃತ್ತಗಳು ಕಂಡುಬಂದಿವೆ. ತೋಗಲಗಲ್ಲಿನಲ್ಲಿ ಶಿಲಾವರ್ಣಚಿತ್ರಗಳು ಗುಹೆಯಲ್ಲಿ ಕಬ್ಬಿಣವನ್ನು ಕರಗಿಸುವ ಅವಶೇಷಗಳು ಕಂಡುಬಂದಿವೆ. ದದ್ದಲದಲ್ಲಿ ಗೋರಿನೆಗಲೆಗಳು ಶಿಲಾವೃತ್ತಗಳು ಗೋರ್ಕಲ್‌ನಲ್ಲಿ ಈ ಸಂಸ್ಕೃತಿಯ ಕಲ್ಮನೆ ಕಲ್ಲುಗುಪ್ಪೆ ಹಾಗೂ ಶಿಲಾವೃತ್ತಗಳು ಕಂಡುಬಂದಿದೆ. ಎಲ್ಕಂದಿನ್ನಿಯ ಗೋರಿ ನೆಲೆಯಾಗಿದ್ದು ಶಿಲಾವೃತ್ತಗಳು ಸಾದಾಪುರದಲ್ಲಿ ಗೋರಿಗೆಲೆ ಕಲ್ಲುಕಪ್ಪೆಗಳು ಕಂಡುಬಂದಿವೆ. ಆದಿ ಹಳೆಯ ಶಿಲಾಯುಗದ ಉಪಕರಣ ಕರೆಗುಡ್ಡದಲ್ಲಿ ದೊರಕಿದೆ.

## ಶಿಲಾ ತಾಮ್ರಯುಗ

ಈ ಶಿಲಾ ತಾಮ್ರಯುಗದ ಸಂಸ್ಕೃತಿಯ ಅವಶೇಷಗಳ ನೆಲೆಗಳು ಮಾನ್ವಿಯ ಕೆಲವು ಗ್ರಾಮಗಳಲ್ಲಿ ಕಂಡುಬಂದಿವೆ. ಕರಡಿಗುಡ್ಡ ನವಿಲುಕಲ್ಲು, ವಟ್‌ಕಲ್.

**ಕಲ್ಲೂರು :** ಈ ಊರಿನ ಗುಡ್ಡಗಳಲ್ಲಿ ತಾಮ್ರದ ಸಂಗ್ರಹವಿರುವುದು ಮಡಕೆ ಭಾಗಗಳು ಸೂಕ್ಷ್ಮ ಶಿಲೋಪಕರಣಗಳಾದ ನೀಳಚಕ್ಕೆ, ಭೂದಿದಿನ್ನ ಕಂಡುಬಂದಿದೆ.

**ಕೋಟ್ನೆಕಲ್ಲು :** ಬಟ್ಟತಲೆಯ ಉಜ್ಜಿ ನಯಗೊಳಿಸಿದ ಕೊಡಲಿ ಉಪಕರಣಗಳು ದೊರತಿವೆ.

**ಕವಿತಾಳ ಮತ್ತು ಗೋರ್ಕಲ್ :** ಇಬ್ಬದಿ ನೀಳಚಕ್ಕೆ, ಕಪ್ಪುವರ್ಣದ ಚಿತ್ರಿತ ಕೆಂಪು ಮಡಿಕೆ ಭಾಗ ನಯಗೋಳಿಸಿದ ಉಪಕರಣಗಳು ದೊರೆತಿವೆ.

**ಬೈಲ್‌ಮರ್ಚಡ್ :** ಗವಿಯಲ್ಲಿ ವರ್ಣಚಿತ್ರ, ಕುದರೆಯ ಚಿತ್ರ ಜ್ಯಾಮಿತಿಯಲ್ಲಿದ್ದು ಕಪ್ಪು ಕೆಂಪು ವರ್ಣದಲ್ಲಿವೆ.

**ಹಾಲಾಪುರ :** ಈ ಸಂಸ್ಕೃತಿಯ ಶಿಲೇಪಕರಣಗಳು ಕಂಡುಬಂದಿದೆ.

**ಸೂಕ್ಷ್ಮ ಶಿಲಾಯುಗಕ್ಕೆ :** ಸಂಬಂಧಿಸಿದಂತೆ ಕಲ್ಲೂರಿನಲ್ಲಿ ಹೆರಚ್ಚಕ್ಕೆ ಉಪಕರಣಗಳು ದೊರೆತಿವೆ.

## ನೂತನ ಶಿಲಾಯುಗ

ಮಾನ್ವಿಯ ಸುತ್ತಮುತ್ತಲಿನ ಗ್ರಾಮಗಳಲ್ಲಿ ಪ್ರಾಚೀನ ಮಾನವನು ಜೀವಿಸಲು ಬೇಕಾಗುವ ಮೂಲಭೂತ ಸೌಲಭ್ಯಗಳನ್ನು ಪ್ರಕೃತಿಯು ಒದಗಿಸಿದೆ. ಮಾನ್ವಿ ತಾಲೂಕಿನ ಕೆಲವು ಗ್ರಾಮಗಳು ನೂತನ ಶಿಲಾಯುಗದ ಆದಿ ಮಾನವನ ನೆಲೆಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ

**ಕಲ್ಲೂರು :** ಬಂಡೆಗಳ ಮೇಲೆ ಮತ್ತು ಗುಹೆಗಳಲ್ಲಿ ಚಿತ್ರಗಳು ಚಿಕ್ಕ ಪ್ರಮಾಣದ ಗೋಳಿಯ ಚಿತ್ರಗಳು ಕಂಡು ಬಂದಿವೆ.

**ಕವಿತಾಳ :** ಬೂದಿದಿಬ್ಬ ಉಜ್ಜಿ ನಯಗೊಳಿಸಿದ ಉಪಕರಣಗಳು ಕಂಡು ಬಂದಿವೆ. ಕಪ್ಪು ಒಡೆದ ಮಡಿಕೆ ಭಾಗಗಳು ಕಂಡು ಬಂದಿವೆ.

**ಬೆಟ್ಟದೂರು :** ನೂತನ ಶಿಲೋಪಕರಣಗಳು, ಸೂಕ್ಷ್ಮ ಶಿಲೋಪಕರಣಗಳು ಕಂಡು ಬಂದಿವೆ.

**ಸಿರಿವಾರ :** ಈ ಸಂಸ್ಕೃತಿಯ ಉಪಕರಣಗಳು ಮತ್ತು ಬೂದಿದಿಬ್ಬ ದಿಣ್ಣೆ ದೊರೆತಿವೆ.

## ೨.೩. ಇತಿಹಾಸದ ಆರಂಭಯುಗ

ಈ ಯುಗಕ್ಕೆ ಸಂಬಂಧಿಸಿದಂತೆ ನವಿಲುಕಲ್ಲು, ವಟಗಲ್, ಮುಷ್ಟೂರಿನಲ್ಲಿ ನೆಲೆಗಳು ಕಂಡುಬಂದಿವೆ.

**ಕಲ್ಲೂರು :** ಕೆಂಪು ಲೋಪನಗಡಿಯ ಬಿಳಿವರ್ಣದ ಮಡಕೆಭಾಗ, ಶಂಕುವಿನ ಬಳೆಭಾಗ ಮಡಿಗಳು ಶಾತವಾಹನದ ನಾಣ್ಯಗಳು ಕಂಡುಬರುವುದರಿಂದ ಈ ಕಾಲದ ಜನರಿಗೆ ಆಭರಣಗಳ ಬಗ್ಗೆ ತಿಳಿದಿದ್ದು ಸೌಂದರ್ಯ ಪ್ರಿಯರಾಗಿದ್ದರು ಎನ್ನುವುದು ಗೊತ್ತಾಗುತ್ತದೆ. ಪ್ರಾಗೈತಿಹಾಸಿಕ ಕಾಲದ ನೆಲೆಗಳು ಕುರುಕುಂದ ಮತ್ತು ಮಾಚನೂರುಗಳಲ್ಲಿ ಕಂಡು ಬಂದು ನಿರ್ದಿಷ್ಟ ಕಾಲದ್ದೆಂದು ತಿಳಿದು ಬಂದಿಲ್ಲ[೮]. (ಶಿಲತಾರಕ)

ಐತಿಹಾಸಿಕ ಘನತೆಯಿಂದ ಪ್ರಸಿದ್ಧವಾದ ರಾಯಚೂರು ಜಿಲ್ಲೆ. ಕರ್ನಾಟಕದ ಚರಿತ್ರೆಯಲ್ಲಿ ಜಿಲ್ಲೆ ವಹಿಸಿದ ಪಾತ್ರವು ಚಿರಸ್ಮರಣೀಯವಾದದು. ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಜಿಲ್ಲೆಗೊಂದು ವಿಶಿಷ್ಟ ಸ್ಥಾನವಿದೆ. ಭಾರದಲ್ಲಿ ಮೊದಲ ದೊರೆತ ಲಿಖಿತ ದಾಖಲೆಗಳೆಂದರೆ ಶಾಸನಗಳು ಇವು ೩ನೇ ಶತಮಾನದ ಅಶೋಕನ ಕಾಲದವು. ಮೌರ್ಯರು ಪಾಟಲಿಪುತ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದರೂ ದಕ್ಷಿಣ ಭಾರತದವರೆಗೂ ಅವರ ಆಳ್ವಿಕೆ ಪಸರಿಸಿತ್ತು. ರಾಯಚೂರು ಜಿಲ್ಲೆ ಕ್ರಿ.ಪೂ.೩೦೦ರಲ್ಲಿ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ಉಲ್ಲೇಖ ಮಸ್ಕಿ ಶಾಸನದಲ್ಲಿ ಲಭ್ಯವಾಗುತ್ತದೆ. ಮೊಟ್ಟ ಮೊದಲ ಬಾರಿಗೆ ದೊರತ ಶಾಸನಗಳಲ್ಲಿ ಅಶೋಕನ ಹೆಸರು 'ದೇವಾನಾಂಪ್ರಿಯ ಪ್ರಿಯದರ್ಶಿ ಅಶೋಕ' ಎಂಬ ಉಲ್ಲೇಖವನ್ನು ನೀಡುತ್ತದೆ. ಈ ಶಾಸನ ಸಿಗುವುದಕ್ಕಿಂತ ಮೊದಲು 'ದೇವಾನಾಂಪ್ರಿಯ ಪ್ರಿಯದರ್ಶಿ' ಅಶೋಕನಿರಬಹುದೆಂದು ಸಂಶೋಧಕರು ಊಹೆ ಮಾಡಿದ್ದರು. ಇಂತಹ ಇನ್ನೊಂದು ಶಾಸನ ನಂತರದಲ್ಲಿ ಮಧ್ಯಪ್ರದೇಶದ ಗುಜರ್ರಾ ಎಂಬಲ್ಲಿ ದೊರೆತಿದೆ[೯]. ಕರ್ನಾಟಕದಲ್ಲಿ ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗ ರಾಮೇಶ್ವರ (ಚಿತ್ರದುರ್ಗ) ಕೊಪ್ಪಳ, ಉದಯಗೊಳಂ, ನಿಟ್ಟೂರು (ಬಳ್ಳಾರಿ ಜಿ.) ಸನ್ನತಿ (ಗುಲ್ಬರ್ಗ)ದಲ್ಲಿ[೧೦]. ದೊರೆತ ಶಾಸನಗಳಿಂದ ಈ ಪ್ರದೇಶಗಳು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿದುಬರುತ್ತದೆ. ಶಾಸನಗಳೇ ಕರ್ನಾಟಕದ ಐತಿಹಾಸಿಕ ಸ್ಪಷ್ಟತೆಗೆ ಮೊಟ್ಟ ಮೊದಲನೆಯ ಸಾಕ್ಷಿಗಳೆನ್ನಬಹುದು.

ಮೌರ್ಯರ ನಂತರ ಶಾತವಾಹನರ ಆಳ್ವಿಕೆ ಪ್ರಾರಂಭವಾಗುತ್ತದೆ. ಇವರು ಕ್ರಿ.ಪೂ.೨೨೦ ರಿಂದ ೨೩೦ವರೆಗೆ ಆಳಿದರು. ಮುಂದೆ ಕದಂಬರು ನಡೆಸಿದರಾದರೂ ಅವರ ಶಾಸನಗಳು ಇಲ್ಲಿ ಲಭ್ಯವಾಗಿಲ್ಲ. ಕದಂಬರ ಮೂಲನೆಲೆ ಬನವಾಸಿಯಾಗಿದ್ದು, ಕರಡಿಕಲ್ಲು ಕದಂಬರು ಎಂಬುದು ಒಂದು ಶಾಖೆಯಾಗಿದೆ. ಇವರು ಸಾಮಂತರಾಗಿ ಆಳ್ವಿಕೆಯನ್ನು ನಡೆಸಿದ್ದಾರೆ. ಮಾನ್ವಿಯ ಕೆಲವು ಗ್ರಾಮಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದ ಎಂಬ ಅಂಶ ತಿಳಿದು ಬರುತ್ತದೆ. ಆದರೆ ಶಾಸನಗಳು ದೊರೆಯುವುದಿಲ್ಲ. ಹಾಗೆಯೇ ಬಾದಾಮಿ ಚಾಲುಕ್ಯರೂ ಆಳ್ವಿಕೆ ನಡೆಸಿದರು ಈ ಭಾಗದಲ್ಲಿ ಅವರ ಶಾಸನಗಳು ಕಂಡುಬರುವುದಿಲ್ಲ.

## ಚಕ್ರವರ್ತಿಗಳು

ಇಡೀ ಸಾಮ್ರಾಜ್ಯಕ್ಕೆ ಒಡೆಯರಾದವರು ಚಕ್ರವರ್ತಿಗಳು. ಇವರ ಕಳಗೆ ಮಹಾಮಂಡಳೇಶ್ವರರು ಮತ್ತು ಮಹಾಸಾಮಂತರು, ದಂಡನಾಯಕರು ವಿವಿಧ ಪ್ರಾಂತಗಳಲ್ಲಿ ಆಳುತ್ತಿದ್ದರು. ಇವರ ಆಳ್ವಿಕೆ ವಂಶ ಪಾರಂಪರ್ಯವಾಗಿ ಮುಂದುವರೆಯುತ್ತಿತ್ತು. ಮಾನ್ವಿ ತಾಲೂಕಿನ ಶಾಸನಗಳಲ್ಲಿ ರಾಷ್ಟ್ರಕೂಟರು. ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ಯಾದವರು, ವಿಜಯನಗರದ ಚಕ್ರವರ್ತಿಗಳ ಆಳ್ವಿಕೆಯನ್ನು ಉಲ್ಲೇಖಿಸಿದೆ[೧೧].

## ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರನ್ನು ಹತ್ತಿಕ್ಕಿ ಕರ್ನಾಟಕದ ಆಳ್ವಿಕೆಯ ಚುಕ್ಕಾಣಿಯನ್ನು ಓಡಿದು ಸಾರ್ವಭೌಮರಾಗಿ ಈಗಿನ ಗುಲ್ಬರ್ಗಾ ಜಿಲ್ಲೆ, ಆಗಿನ ಮಾನ್ಯಖೇಟವನ್ನು ರಾಜಧಾನಿಯಾಗಿಸಿಕೊಂಡು ಕನ್ನಡ ನಾಡು ನುಡಿಗೆ, ಸಂಸ್ಕೃತಿಗೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಬಾದಾಮಿ ಚಾಲುಕ್ಯರ ಕೊನೆಯ ಅರಸ ೨ನೇ ಕೀರ್ತಿವರ್ಮನನ್ನು ಸೋಲಿಸಿ ರಾಜ್ಯವನ್ನು ವಶಪಡಿಸಿಕೊಂಡು ದಂತಿದುರ್ಗನು ಕ್ರಿ.ಶ.೭೫೩ರಲ್ಲಿ ಅಧಿಕಾರಕ್ಕೆ ಬಂದನು. ಇವನು ರಾಷ್ಟ್ರಕೂಟರ ಮೂಲಪುರುಷನಾಗಿದ್ದಾನೆ.

ರಾಷ್ಟ್ರಕೂಟರು ಅನೇಕ ವಿಜಯಗಳಿಂದ ತಮ್ಮ ಮೇಲ್ಮೈಯನ್ನು ಸ್ಥಾಪಿಸಿಕೊಳ್ಳುವ ನೂತನ ರಾಜ್ಯಭಾಗಗಳಲ್ಲಿ ತಮ್ಮ ಆಳ್ವಿಕೆಯನ್ನು ಶಾಸನಬದ್ಧಗೊಳಿಸಿಕೊಳ್ಳುವ ಅಗತ್ಯವನ್ನು ಮನಗಂಡರು. ದೈವಿಕ ವಂಶದ ಮೂಲವನ್ನು ಹೇಳಿಕೊಳ್ಳುವುದರಿಂದ ತಮ್ಮ ಪಾರಮ್ಯಕ್ಕೆ ಇವರು ಸಮರ್ಥವನ್ನು ನೀಡಲೆತ್ನಿಸಿದರು. ಇದಕ್ಕೆ ಅವರು ಕೃಷ್ಣನನ್ನೆ ಮೂಲ ಪುರುಷನನ್ನಾಗಿ ಇರಿಸಿಕೊಂಡಿರುವುದು[೧೨] ಕಂಡು ಬಂದಿದೆ.

ಇವರು ನರ್ಮದೆಯಿಂದ ಕಾವೇರಿವರೆಗಿನ ಭೂಭಾಗವನ್ನು ತಮ್ಮ ನೇರವಾದ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು. ಇಷ್ಟು ಮಾತ್ರವಲ್ಲದೆ ಹಲವುಬಾರಿ ತಮ್ಮ ಪೌರುಷ ಪ್ರಾಬಲ್ಯದಿಂದಾಗಿ ದಕ್ಷಿಣ ಗುಜರಾತ, ಮಾಳ್ವ, ಆಂದ್ರ, ಕಂಚಿ ಮತ್ತು ತಂಜಾವೂರು ಪ್ರದೇಶಗಳ ಮೇಲೆ ಅಧಿಕಾರವನ್ನು ಸ್ಥಾಪಿಸಿದರು. ಭರತಖಂಡದ ಇನ್ನಿತರ ಪ್ರಬಲ ರಾಜವಂಶಗಳನ್ನು ಮಣಿಸಿ ಅರಬ್ ಇತಿಹಾಸಿಕಾರ ಸುಲೇಮಾನ್ ಪ್ರಕಾರ ವಿಶ್ವದ ೪ ಬೃಹತ್ ರಾಷ್ಟ್ರಗಳಲ್ಲಿ ಒಂದೆನಿಸಿದ ಈ ರಾಜವಂಶ ಕ್ರಿ.ಶ. ೮ರಿಂದ ೧೪ನೇ ಶತಮಾನದವರೆಗೆ ಭಾರತವನ್ನೆಲ್ಲ ಕರ್ನಾಟಕವನ್ನಾಗಿ ಮಾಡಿದ್ದು ಅತ್ಯಂತ ಅಭಿಮಾನದ ಸಂಗತಿಯಾಗಿದೆ. ಈ ಕಾರಣದಿಂದ ಈ ಅವಧಿಯ ಭಾರತದ ಚರಿತ್ರೆಯನ್ನು ರಾಷ್ಟ್ರಕೂಟಯುಗವೆಂದು ಕರೆಯುವುದು ಸಮಂಜಸವೆಂದು ಕೆಲವರು ಇತಿಹಾಸಕಾರರು ಅಭಿಪ್ರಾಯ[೧೩].

ಮಾನ್ವಿ ತಾಲೂಕಿನಲ್ಲಿ ಇವರ ಆಳ್ವಿಕೆಯನ್ನು ಉಲ್ಲೇಖಿಸುವ ಶಾಸನಗಳು ದೊರಕುತ್ತವೆ. ದಂತಿದುರ್ಗನ ಅಲ್ಪಕಾಲದ ಆಳ್ವಿಕೆಯ ನಂತರ ತಂದೆಯ ತಮ್ಮ ಕೃಷ್ಣನಿಗೆ ಪಟ್ಟವಾಯಿತು. (ಸು.೭೫೬) ಚಾಲುಕ್ಯ ೨ನೇ ಕೀರ್ತಿವರ್ಮನನ್ನು ಈತನು ಪೂರ್ತಿಯಾಗಿ ಸೋಲಿಸಿದ. ದಕ್ಷಿಣ ಕೊಂಕಣವನ್ನು ಗೆದ್ದು ಶಿಲಾಹಾರ ಸಣಪುಲ್ಲನನ್ನು ಅಲ್ಲಿ ಮಾಂಡಲಿಕನನ್ನಾಗಿ ನೇಮಿಸಿದ. ಗಂಗ ಶ್ರೀ ಪುರುಷನ ಜೊತೆ

ತೀವ್ರ ಕಾಳಗಗಳಾದವು. ರಾಜಪುತ್ರ (ಕೃಷ್ಣನ ಮಗ) ಗೋವಿಂದನು (ನಿತ್ಯವರ್ಷ)ವೆಂಗಿಯ ಮೇಲೆ ದಂಡೆತ್ತಿ ನಡೆದು ಚಾಲುಕ್ಯ ೪ನೇ ವಿಷ್ಣುವರ್ಧನನ್ನು ಸೋಲಿಸದ (೭೭೦) ಈ ಚಾಲುಕ್ಯ-ರಾಷ್ಟ್ರಕೂಟ ದ್ವಂದ್ವ ಅನೇಕ ಪೀಳಿಗೆಗಳ ಕಾಲ ಸಾಗಿತ್ತು[೧೪].

ಮಾನ್ವಿ ತಾಲೂಕಿನ ಬಲ್ಲಟಗಿಯಲ್ಲಿ ನಿತ್ಯವರ್ಷನಿಗೆ (ಗೋವಿಂದ) ಸಂಬಂಧಿಸಿದ ಶಾಸನವೊಂದು ದೊರೆಕಿದೆ. ಇದರಲ್ಲಿ ಈತನ ಹೆಸರು ಮತ್ತು ಒಳ್ಳನಿಟ್ಟಗೆ ಗ್ರಾಮದ ಉಲ್ಲೇಕವಿದೆ. ಈತನು ಒಳ್ಳನಿಟ್ಟಿಗೆಯಲ್ಲಿದ್ದಾಗ ಈ ಗ್ರಾಮ ಮತ್ತು ಸುತ್ತಮುತ್ತಲಿನ ಪ್ರದೇಶ ಈನತ ಆಳ್ವಿಕೆಗೆ ಒಳಪಟ್ಟ ವಿಷಯ ಗೊತ್ತಾಗುತ್ತದೆ.

ಅದೇ ರೀತಿಯಾಗಿ ೩ನೇ ಅಮೋಘವರ್ಷನ ಮಗನಾದ ೩ನೇ ಕೃಷ್ಣ ತನ್ನ ತಂದೆಯ ಪಟ್ಟಗ್ರಹಣಕ್ಕೆ ನೆರವಾದವರಲ್ಲಿ ಪ್ರಮುಖನು. ಆಗ ಯುವರಾಜನಾದ ಈತನೇ ತಂದೆಯ ಕಾಲದಲ್ಲಿ ಆಡಳಿತ ಜವಾಬ್ದಾರಿಗಳನ್ನು ಹೊತ್ತಿದ್ದನು. ೯೩೯ರಲ್ಲಿ ಪಟ್ಟವೇರಿದ ಕೃಷ್ಣನಿಗೆ ಅಕಾಲವರ್ಷ, ಶ್ರೀವಲ್ಲಭ ಎಂಬ ಬಿರುದುಗಳಿದ್ದವು. ಕನ್ನರ, ಕಂದಾರ ಎಂಬವು ಅವನ ಇತರ ಹೆಸರುಗಳು ೩ನೇ ಕೃಷ್ಣನು ಚೋಳರ ಮೇಲೆ ದಂಡೆತ್ತಿ ಹೋಗಿ ಕಾಂಚಿ, ತಂಜಾವೂರು, ರಾಮೇಶ್ವರಗಳನ್ನು ಗೆದ್ದು ರಾಮೇಶ್ವರವಲ್ಲಿ ವಿಜಯಸ್ತಂಭವನ್ನು ಸ್ಥಾಪಿಸಿದನು. ಇದಲ್ಲದೆ ಕೃಷ್ಣನು ಗಂಗಮಾರಸಿಂಹನ ನಾಯಕತ್ವದಲ್ಲಿ ಸೈನ್ಯವನ್ನು ಕಳುಹಿಸಿದನು. ಇವನು ಗುರ್ಜರು ಪ್ರತೀಹಾರರು, ಪರಮಾರರನ್ನು ಸೋಲಿಸಿ ಕಪ್ಪವನ್ನು ಪಡೆದು ವಿಜಯದ ಸ್ಮಾರಕವಾಗಿ ಮಧ್ಯಪ್ರದೇಶದ ಜಬ್ಬಲಪುರ ಬಳಿಯ ಜೂರಾದಲ್ಲಿ (ಕೃಷ್ಣನು) ಕೃಷ್ಣನ ಒಂದು ಕನ್ನಡ ಶಾಸನವಿದೆ ಸಂಸ್ಕೃತ ಶಸನವೂ ಕೂಡಾ ದೊರಕಿದೆ. ಬೋಗಾವತಿಯ ಶಾಸನವು ಈತನನ್ನು ಈತನ ತಮ್ಮ ಜಗತ್ತುಂಗನನ್ನು ಕುರಿತು ತಿಳಿಸುತ್ತದೆ.

ಈ ಭಾಗದ ನುಗುಡೋಣಿಯು ಈತನ ಆಳ್ವಿಕೆಗೆ ಒಳಪಟ್ಟಿತ್ತು ಎನ್ನುವುದಕ್ಕೊಂದು ದಾನ ಕೊಟ್ಟ ಶಾಸನವೊಂದು ಕಂಡುಬಂದಿದೆ. ಇದಕ್ಕೂ ಪೂರ್ವದಲ್ಲಿ ಕುರುಡಿ ಕ್ರಿ.ಶ.೮೯೨ ಖಾಗಲವಾಡ ಕ್ರಿ.ಶ.೧೧ನೇ ಶತಮಾನದಲ್ಲಿ ಕ್ರಮವಾಗಿ ಗೊಗೇಬಾಲ ಪಡಪನದೊಡ್ಡ, ಸಿರಿವಾರ ಮತ್ತು ಮಾನ್ವಿಯ ೧೯ ಶಾಸನಗಳಲ್ಲಿ ಚಕ್ರವರ್ತಿಗಳ ಆಳ್ವಿಕೆಯನ್ನು ಉಲ್ಲೇಖಿಸುವ ಶಾಸನಗಳು ಕಂಡುಬಂದಿವೆಯಾದರೂ ಚಕ್ರವರ್ತಿಗಳ ಹೆಸರು ಉಲ್ಲೇಖಗೊಂಡಿಲ್ಲ. ಈ ರೀತಿಯಾಗಿ ಇವರ ಆಳ್ವಿಕೆಯನ್ನು ತಿಳಿಸುವ ಶಾಸನಗಳು ರಾಯಚೂರು ಜಿಲ್ಲೆಯ ಸುತ್ತಮುತ್ತಲಿನ ಪರಿಸರದಲ್ಲಿ ಗುರುತಿಸಬಹುದಾದರು ಶಾಸನಗಳಲ್ಲಿ ಅಪೂರ್ಣವಾದ ವಿವರಗಳನ್ನು ಕಾಣಬಹುದಾಗಿದೆ.

## ಕಲ್ಯಾಣ ಚಾಲುಕ್ಯರು

ಒಂದು ಕಾಲದಲ್ಲಿ ಪ್ರಬಲರಾಗಿ ಆಳ್ವಿಕೆ ನಡೆಸುತ್ತಿದ್ದ ರಾಷ್ಟ್ರಕೂಟರನ್ನು ಚಾಲುಕ್ಯ ಇಮ್ಮಡಿ ತೈಲಪನು ರಾಷ್ಟ್ರಕೂಟರ ಇಮ್ಮಡಿ ಕರ್ಕನನ್ನು ಸುಮಾರು ೯೭೩ರ ಯುದ್ಧದಲ್ಲಿ ಸೋಲಿಸಿ, ಪದಚ್ಯುತಗೊಳಿಸಿ ಅವನ ಆಡಳಿತವನ್ನು ಕೊನೆಗೊಳಿಸಿ ತಾನೇ ಕ್ರಿ.ಶ.೯೭೩ರಲ್ಲಿ ಮಾನ್ಯಖೇಟದಲ್ಲಿ ಅಧಿಕಾರಗ್ರಹಣ ಮಾಡಿದನು. ಕಲ್ಯಾಣಿ ಚಾಲುಕ್ಯರೆಂದು ಗುರುತಿಸಿಕೊಳ್ಳುವ ಈ ವಂಶದವರು ಬಾದಾಮಿ ಚಾಲುಕರೆಂದು

ವಂಶಜರೆಂದು ಅನೇಕ ಆಧಾರಗಳಿಂದ ತಿಳಿದು ಬರುತ್ತದೆ. ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯಕ್ಕೆ ಭದ್ರಬೂನಾದಿಯನ್ನು ಹಾಕಿದವನು ಇಮ್ಮಡಿ ತೈಲಪ, ನಂತರ ಇವನ ಮಗ ಸತ್ಯಾಶ್ರಯನು ಆಳ್ವಿಕೆಯನ್ನು ಮುಂದುವರಿಸಿದನು ಇವನನ್ನು ಅಹವಮಲ್ಲ, ಇರುವೆಬೆಡಂಗ ಸಹಾಸಭೀಮ ವಿಜಯ ಇತ್ಯಾದಿ ಬಿರುದುಗಳನ್ನು ಹೊಂದಿದ್ದನು. ಕನ್ನಡದ ರತ್ನತ್ರಯರಲ್ಲಿ ಒಬ್ಬನಾದ ಶ್ರೇಷ್ಠಕವಿ ರನ್ನನು ತನ್ನ ಗದಾಯುದ್ಧಕ್ಕೆ ಸತ್ಯಾಶ್ರಯನನ್ನೇ ನಾಯಕನನ್ನಾಗಿ ಮಾಡಿಕೊಂಡಿದನಲ್ಲದೆ ಇದೇ ಕಾವ್ಯದಲ್ಲಿ ಈ ಚಾಲುಕ್ಯ ವಂಶದ ಉಲ್ಲೇಖವು ಕಂಡುಬರುತ್ತದೆ.

ಇವನ ನಂತರ ಆಳ್ವಿಕೆ ಮಾಡಿದ ಕೆಲವು ಅರಸರಿಗೆ ಸಂಬಂಧಿಸಿದ ಉಲ್ಲೇಖಗಳು ಕಂಡುಬರುವುದಿಲ್ಲ. ಅವರುಗಳೆಂದರೆ ರಸವರ್ಮ, ೫ನೇ ವಿಕ್ರಮಾದಿತ್ಯ, ಅಯ್ಯಣ, ರಾಯಚೂರು ಜಿಲ್ಲೆಯ ರಾಜಕೀಯವಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ತುಂಬ ಮಹತ್ವವನ್ನು ಪಡೆದುಕೊಂಡಿತು. ಈ ಜಿಲ್ಲೆಯಲ್ಲಿ ಮಾನ್ವಿ ತಾಲೂಕಿನಲ್ಲಿ ಇವರ ಕಾಲಕ್ಕೆ ಸಂಬಂಧಿಸಿದ ಶಾಸನಾಧಾರಗಳು ಹೆಚ್ಚು ಸಂಖ್ಯೆಯಲ್ಲಿ ದೊರಕುತ್ತವೆ.

ಮೊದಲನೆಯದಾಗಿ ಈ ವಂಶದ ಅಯ್ಯಣನ ನಂತರ ಇವನ ತಮ್ಮನಾದ ಜಗದೇಕಮಲ್ಲ ಎಂದು ಚಿರಪರಿಚಿತನಾಗಿರುವ ೨ನೇ ಜಯಸಿಂಹನು ಮಲ್ಲಿಕಾಮೋದ ಎಂಬ ಬಿರುದನ್ನು ಹೊಂದಿದ ಈತನ ರಾಣಿಯ ಕುರಿತು ತಿಳಿಸುವ ಕ್ರಿ.ಶ.೧೦೨೨ರಲ್ಲಿಯ ಬಲ್ಲಟಗಿ ಶಾಸನವು ಚಕ್ರವರ್ತಿ ೨ನೇ ಜಯಸಿಂಹನ ರಾಣಿ ಮಹಾದೇವಿಯ ಪುವ್ವರವಳ್ಳಿ ಬೀಡಿನಲ್ಲಿದ್ದಾಗ ತಂತ್ರಪಾಳ ಮಲ್ಲಿಯ್ಯನು ಬಳ್ಳನಿಟ್ಟಗೆ (ಬಲ್ಲಟಗೆ)ಯಲ್ಲಿ ಪ್ರತಿಷ್ಠಾಪಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ (ಎಡದೊರೆ ೨೦೦೦ದ ಉಪ ವಿಭಾಗವಾಗಿತ್ತು) ೩೦೦ ಮನ್ನೆಯ ಲೋಕಾದಿತ್ಯನಿಂತ ಭೂಮಿಯನ್ನು ಪಡೆದು ದಾನ ನೀಡುತ್ತಾಳೆ. ಎಂದು ಉಲ್ಲೇಖಿಸಲಾಗಿದೆ[೧೫].

ಮಾನ್ವಿ ಪಟ್ಟಣದಲ್ಲಿ ದೊರೆತ ಶಾಸನದಲ್ಲಿ ಕಾಲದ ಉಲ್ಲೇಖ ಹಾಳಾಗಿದ್ದು ಚಾಲುಕ್ಯ ಜಗದೇಕಮಲ್ಲನ ಆಳ್ವಿಕೆಯನ್ನು ಉಲ್ಲೇಖಿಸುತ್ತಾ ಅವನ ಮಹಾಸಾಮಂತನಾದ ಮಹಿಶ್ಮಲೇಪುರದ ಗಣ್ಣರಾದಿ(ತ್ಯ)ನ ಉಲ್ಲೇಖವನ್ನು ತಿಳಿಸುತ್ತದೆ[೧೬].

ಕ್ರಿ.ಶ. ೧೦೩೩ರಲ್ಲಿ ಜಗದೇಕಮಲ್ಲನು ಏತಗಿರಿಯ (ಈಗಿನ ಯಾದಗಿರಿ) ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಅವನ ರಾಣಿಯಾದ ಬಿಜ್ಜಲ ದೇವಿಯು ಅಗ್ರಹಾರ, ತಡಕಲ್ಲಿನಲ್ಲಿ ದೇವಾಲಯವೊಂದಕ್ಕೆ ಸೂರ್ಯಗ್ರಹಣದ ದಿವಸ ಭೂದಾನ ನೀಡಿದಂತೆ ತಿಳಿಸುತ್ತದೆ[೧೭]. ಇಂತಹದೆ ಇನ್ನೊಂದು ಶಾಸನ ಕ್ರಿ.ಶ.೧೦೩೨ರ ಸುಂಕನೂರಿನ ಶಾಸನವು ಬಿಜ್ಜಲದೇವಿಯು ಪೊಟ್ಟಳಕೆರೆ ನೆಲೆವೀಡಿನಲ್ಲಿದ್ದುಕೊಂಡು ದುಗ್ಗಪಳ್ಳಿಯಲ್ಲಿ ನಾಗರಕಲ್ಲನ್ನು ಮಾಡಿಸಿರುವ ವಿಷಯ ತಿಳಿದು ಬರುತ್ತದೆ[೧೮].

ಇವುಗಳಲ್ಲಿ ಕೆಲವು ಜಗದೇಕಮಲ್ಲ ಅಥವಾ ೨ನೇ ಜಯಸಿಂಹನ ಆಳ್ವಿಕೆಯ ಕಾಲದಲ್ಲಿ ಸ್ತ್ರೀಯರಿಗೂ ಸಾಮಾಜಿಕ ಕಾರ್ಯಗಳಲ್ಲಿ, ಆಡಳಿತದಲ್ಲಿ ಭಾಗವಹಿಸಲು ಅವಕಾಶವನ್ನು ಒದಗಿಸಿದ್ದರು ಎಂಬ ಅಂಶ ತಿಳಿದುಬರುತ್ತದೆ. ಇದಲ್ಲದೆ ಸಮಾಜದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿರುವ ವಿಷಯ ಸ್ಪಷ್ಟವಾಗುತ್ತದೆ. ಇದಲ್ಲದೆ ಅರಸನು ಕೆಲವು ಆಡಳಿತ ಪ್ರದೇಶದಲ್ಲಿದ್ದುಕೊಂಡು ಆಳ್ವಿಕೆಯನ್ನು ನಡೆಸುವ ವಿಷಯ ತಿಳಿಯಬಹುದಾಗಿದೆ.

ಇಮ್ಮಡಿ ಜಯಸಿಂಹನ ನಂತರ ಅವನ ಮನಗಾದ ೧ನೇ ಸೋಮೇಶ್ವರನು ಕ್ರಿ.ಶ.೧೦೪೪ರಲ್ಲಿ ಅಧಿಕಾರ ವಹಿಸಿಕೊಂಡು ಕ್ರಿ.ಶ.೧೦೬೮ರ ವರೆಗೆ ೨೪ವರ್ಷಗಳ ಕಾಲ ಆಳಿದನು. ಈತನಿಗೆ "ತ್ರೈಲೋಕ್ಯಮಲ್ಲ" ಎಂಬ ಬಿರುದು ಇತ್ತು. ಈತನಿಗೆ ಹೊಯ್ಸಳ ವಿನಯಾದಿತ್ಯ" ಗೋವೆಯ ಕದಂಬರ ವಂಶದ ಜಯುದೇಕ ಸಾಮಂತರಾದ್ದರು. ಈತನ ಕೊನೆಯ ದಿನಗಳು ಸುಖಕರವಾಗಿರಲಿಲ್ಲವಾದ್ದರಿಂದ ಕುರುವತ್ತಿಯ ಬಳಿ ತುಂಗಾಭದ್ರೆಯ ಮುಳುಗಿ ಸಾವನ್ನಪ್ಪವನು.

ಈತನಿಗೆ ಸಂಬಂಧಿಸಿದ ಕೆಲವು ಶಾಸನಗಳು ಮಾನ್ವಿ ತಾಲೂಕಿನ ಬೇರೆ ಬೇರೆ ಗ್ರಾಮಗಳಲ್ಲಿ ದೊರಕುತ್ತವೆ. ಇವುಗಳಲ್ಲಿ ಬಹುತೇಕ ಕಾಲದ ಉಲ್ಲೇಖ ತ್ರುಟಿತವಾಗಿವೆ. ಮಾನ್ವಿ ಪಟ್ಟಣದ ಮಸೀದಿ ಹತ್ತಿರುವಿರುವ ಶಾಸನದಲ್ಲಿ ಕಾರ್ತವೀರ್ಯಕುಲದ ಅರಸನೊಬ್ಬ (ಹೆಸರು ಹಾಳಾಗಿದೆ) ಎಡದೊರೆ-೨೦೦೦ವನ್ನು ಆಳುವ ವಿಷಯದ ಜೊತೆಗೆ ತಂತ್ರಪಾಳ ಗಂಗರ ಚಾವುಂಡ ಮಯ್ಯನ ಕುರಿತು ಉಲ್ಲೇಖಿಸುತ್ತದೆ[೧೯].

ಇದೇ ಪಟ್ಟಣದ ಎಡ್ಡಕೆರೆಯ ಬಳಿ ಬಿದ್ದಿರುವ ಕ್ರಿ.ಶ.೧೦೫೨ ಶಾಸನವು ತ್ರೈಲೋಕ್ಯಮಲ್ಲನು ಕಲ್ಯಾಣದಿಂದ ಆಳುತ್ತಿದ್ದಾಗ ಅವನ ಸಾಮಂತ ದೇವರಸನು ಎಡದೊರೆ ೨೦೦೦ವನ್ನು ಆಳುತ್ತಿದ್ದ ವಿಷಯದ ಜೊತೆಗೆ ತಂತ್ರಪಾಳ ಚಾವುಂಡ ಮಯನಾಯಕನ ಉಲ್ಲೇಖ ತಿಳಿದುಬರುತ್ತದೆ[೨೦].

ಅದೇ ರೀತಿಯಾಗಿ ಆತನೂರು ಗ್ರಾಮದ ಈಶ್ವರ ದೇವಾಲಯದ ಮೆಟ್ಟಲಿಗೆ ಸೇರಿಸಿರುವ ಕಾಲದ ಉಲ್ಲೇಖವಿಲ್ಲದ ಈತನು ಕಲ್ಯಾಣದಿಂದ ಆಳ್ವಿಕೆಯನ್ನು ಮಾಡುತ್ತಿರುವಾಗ ಮಹಾಮಂಡಳೇಶ್ವರ ದೇವರಸನು ಎಡದೊರೆ ೨೦೦೦ವನ್ನು ಆಳುವ ವಿಷಯ ತಿಳಿದು ಬರುತ್ತದೆ[೨೧]. ಬಾಗಲವಾಡದ ೧೦೫೩ರ ಶಾಸನವು ತ್ರೈಲೋಕ್ಯಮಲ್ಲನ ರಾಣಿ (ಹೆಸರು ಹಾಳಾಗಿದೆ)ಯ ಕುರಿತು ತಿಳಿಸುತ್ತದೆ[೨೨].

ಬಲ್ಲಟಗಿಯ ಕ್ರಿ.ಶ.೧೦೫೮ರ ಶರಣಪ್ಪನ ಹೊಲದಲ್ಲಿರುವ ಈ ಶಾಸನದಲ್ಲಿ ರಾಣಿ ಚಾಮಲದೇವಿಯ ಮತಿಯ (ಮಾಳಾಪುರ) ನೆಲೆವೀಡಿನಲ್ಲಿದ್ದಾಗ ತುಂಗಭದ್ರಾ ಮತ್ತು ಕೃಷ್ಣ ನದಿಯಲ್ಲಿ ಪುಣ್ಯ ಸ್ನಾನ ಮಾಡಿ ಕೆಲವು ದಾನ ನೀಡಿದ ವಿಷಯ ಪ್ರಾಸ್ತಾಪಿಸುತ್ತದೆ.

ತ್ರೈಲೋಕ್ಯಮಲ್ಲನ ನಂತರ ಭಾವನ್ಯೈಕ್ಯ ಮಲ್ಲನನ್ನು ಕುರಿತು ತಿಳಿಸುವ ದದ್ದಲದ ಕ್ರಿ.ಶ.೧೦೬೯ರ ಶಾಸನವು ಇವನ ಮಹಾಮಂಡಳೇಶ್ವರ ಜಟಾಜೋಳ ಭೀಮರಾಯ ಹಲವಾರು ಹೆಸರುಗಳಿಂದ ಗುರುತಿಸಲಾಗಿದೆ. ಇವನ ಸಾಮಾಂತ ಮಳೆಯ ಮರಸನು ಆಳುತ್ತಿದ್ದಾಗ ಪೊನ್ನಪಾಳಿನಲ್ಲಿ ಮಾಕಿಸೆಟ್ಟಿಯು 'ಗಿರಿಕೋಟಿಮಲ್ಲ' ಎಂಬ ಹೆಸರಿನ ಜಿನಾಲಯವನ್ನು ಕಟ್ಟಿಸಿರುವ ವಿಷಯ ಗೊತ್ತಾಗುತ್ತದೆ. ಕಪ್ಪುಗಲ್ಲು ಕ್ರಿ.ಶ.೧೦೬೯ರ ಶಾಸನವು ಭುವನ್ಯೈಕಮಲ್ಲನ ಕೆರೆಯಿತ್ತ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದ ಸಂದರ್ಭದಲ್ಲಿ ರಾಣಿ ಪಂಪಾದೇವಿಯನ್ನು ಬೇರೆ ಬೇರೆ ಹೆಸರುಗಳಿಂದ ಸೂಚಿಸಿರುವುದು ತಿಳಿದು ಬರುತ್ತದೆ.

ಹರವಿ ಗ್ರಾಮದ ಪೋಲಿಸ್ ಪಟೇಲ್ ಚಾವಡಿಯ ಗೋಡೆಯಲ್ಲಿರುವ ೧೦೭೬ರ ಈ ಶಾಸನವು ಈತನ ರಾಣಿಯು (ಹೆಸರು ದೊರೆತಿಲ್ಲ) ಎಡದೊರೆ-೨೦೦೦ದ ಗ್ರಾಮವೊಂದರಲ್ಲಿ ಸ್ವಯಂಭೂ ಮೂಲಸ್ಥಾನ ದೇವಾಲಯಕ್ಕೆ ದಾನ ನೀಡುದ ವಿಷಯ ಕಂಡುಬರುತ್ತದೆ.

ಭೂಮಿಯ ಮೇಲೆ ಕಲ್ಯಾಣದಂಥ ಮತ್ತೊಂದು ನಗರ ಈ ಹಿಂದೆ ಇರಲಿಲ್ಲ. ಇಂದೂ ಇಲ್ಲ, ಮುಂದೆಯು ಹುಟ್ಟುವುದಿಲ್ಲ, ವಿಕ್ರಮಾದಿತ್ಯನಂತಹ ಚಕ್ರವರ್ತಿ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎಂದು 'ವಿಜ್ಞಾನೇಶ್ವರನು' ಮಿತಾಕ್ಷರ' ಹೆಸರಿನ ತನ್ನ ಧರ್ಮಶಾಸ್ತ್ರ ಗ್ರಂಥದಲ್ಲಿ ಹೇಳಿದ್ದಾನೆ. ೯ನೇ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ ಜೆ.ಎಂ.ನಾಗಯ್ಯ ಪೀರಶೈವ ಅಧ್ಯಯನ ಅಕಾಡೆ ನಾಗನೂರು ರುದ್ರಾಕ್ಷಿ ಮಠ ಬೆಳಗಾವಿ, ಹಾಗೆಯೇ ಕುಶಾಗ್ರಮತಿಯು, ನಿಪುಣ ಆಡಳಿತಗಾರ[೨೩]. ಪರಾಕ್ರಮಿಯೂ ಆದ ೬ನೇ ವಿಕ್ರಮಾದಿತ್ಯನು ಕರ್ನಾಟಕದ ಅರಸರಲ್ಲಿ ರಾಷ್ಟ್ರಮಟ್ಟದ ಗೌರವಗಳಿಸಿದ ಚಕ್ರವರ್ತಿಗಳಲ್ಲಿ ಅಗ್ರಸ್ಥಾನ ಪಡೆಯುತ್ತಾನೆ. ಈತನ ಕಾಲದಲ್ಲಿ ಮಾನ್ವಿ ತಾಲೂಕಿನ ಬೆರಳಣಿಕೆಯ ಗ್ರಾಮಗಳು ಆಡಳಿತಕ್ಕೆ ಒಳಪಟ್ಟಿದ್ದವು ಎಂಬ ಅಂಶ ಈ ಭಾಗದಲ್ಲಿ ದೊರೆತ ಶಾಸನ ಸ್ಮಾರಕಗಳಿಂದ ತಿಳಿದು ಬರುತ್ತದೆ.

ಚಾಲುಕ್ಯರಸ ೧ನೇ ಸೋಮೇಶ್ವರನು ಪಟ್ಟವೇದಾಗ ಪರಮಾರ ರಾಜ್ಯದ ರಾಜಕೀಯದಲ್ಲಿ ಪಾಲುಗೊಂಡಿದ್ದ ವಿಕ್ರಮಾದಿತ್ಯನು ಮುಂದೆ ಬನವಾಸಿ ಮಂಡಲದ ಅಧಿಪತಿಯಾಗಿ ಅಲ್ಲಿಂದ ಚೋಳ ವೀರರಾಜೇಂದ್ರನ ಮೇಲೆ ದಂಡೆತ್ತಿ ಹೋಗಲು ಈತನ ಜೊತೆ ಸ್ನೇಹ ಸಂಬಂಧವನ್ನು ಮಗಳನ್ನು ಕೊಡುವುದರ ಮೂಲಕ ಬೆಳಸುವನು ಎಂದು 'ವಿಕ್ರಮಾಂಕದೇವಚರಿತಂ'ನಲ್ಲಿ ಉಲ್ಲೇಖಿಸಿ. ತಮ್ಮನ ಮೇಲಿನ ಮಾತ್ಸರ್ಯದಿಂದಾಗಿ ಕ್ರಿ.ಶ.೧೦೭೬ರಲ್ಲಿ ೨ನೇ ಸೋಮೇಶ್ವರನನ್ನು ಸೋಲಿಸಿ ಕ್ರಿ.ಶ.೧೦೭೬ ನವ ಸಂವತ್ಸರದಲ್ಲಿ ಚಕ್ರವರ್ತಿಯಾಗಿ ಕ್ರಿ.ಶ.೧೧೨೬ರ ವರೆಗೆ ಸುಮಾರು ೫೦ ವರ್ಷಗಳ ಕಾಲ ಆಳ್ವಿಕೆ ಮಾಡಿ 'ತ್ರಿಭುವನಮಲ್ಲ' ಎಂಬ ಬಿರುದು ಹೊಂದಿದ ಈತನು ವಿಕ್ರಮ ಶಕ ವರ್ಷವನ್ನು ಪ್ರಾರಂಭಿಸಿದನು,.

ಮಾನ್ವಿಯ ಸಣ್ಣ ಗ್ರಾಮದ ಸಂಕೇಶ್ವರದ ಸುಡುಗಾಡು ಗದ್ದೆ ಹೊಲದಲ್ಲಿ ಕ್ರಿ.ಶ.೧೦೪೭ರ ಶಾಸನವು ಈತನ ಆಳ್ವಿಕೆ ಕಾಲದ್ದಾಗಿದ್ದು ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯದೇವನು ಅಯ್ಯಣವಾಡಿಯನ್ನು ಅಣುಗ ಜೀವಿತವಾಗಿ ಆಳುತ್ತಿದ್ದ ಸಂದರ್ಭದಲ್ಲಿ ಬೋಕೇಶ್ವ ದೇವರಿಗೆ ಲೋಕಾಭರಣ ಪಂಡಿತರ ಕೈಯಲ್ಲಿ ದಾನ ಕೊಟ್ಟಿರುವ ವಿಷಯ ತಿಳಿಸುತ್ತದೆ.

ಕುರುಡಿ ಗ್ರಾಮದ ನೀಲಗುಹಿಯ ಗೋಡೆಗೆ ಒರಗಿಸಿರುವ ಕ್ರಿ.ಶ. ೧೦೯೨ರ ಶಾಸನವು ಈತನ ಆಳ್ವಿಕೆ ಕಾಲದ್ದಾಗಿದ್ದು ಅಗ್ರಹಾರ ರೂಡಿಯ ಮಹಾಜನಗಳ ವರ್ಣನೆಯಿದ್ದು ದೇವಾಲಯಕ್ಕೆ ದಾನ ಬಿಟ್ಟಂತಿದೆ.

೬ನೇ ವಿಕ್ರಾಮಾದಿತ್ಯನ ಕಾಲದಲ್ಲಿ ರೂಡಿಯು (ಈಗಿನ ಕುರುಡಿ ಗ್ರಾಮ) ಒಂದು ಅಗ್ರಹಾರವಾಗಿ ಮತ್ತು ಬ್ರಾಹ್ಮಣರು ಈ ಗ್ರಾಮದಲ್ಲಿದ್ದ ವಿಷಯ ತಿಳಿದುಬರುತ್ತದೆ.

ಇದೇ ಗ್ರಾಮದ ಚಾಗಿನೋಳಿ ಎಡ್ಡಿಯ ಸಮೀಪವಿರುವ ಕ್ರಿ.ಶ.೧೧೧೯ರ ಈ ಶಾಸನವು ತ್ರಿಭುವನಮಲ್ಲನು ಜಯಂತಿಪುರದ ನೆಲೆಪೀಡಿನಿಂದ ಆಳುತ್ತಿದ್ದಂತೆ ಆರಂಭದಲ್ಲಿ ವಾಸುದೇವನ ನಮಗ ಮಧುಸೂಧನನನ್ನು ಹೊಗಳಲಾಗಿದೆ. ಈತನಿಗೆ ಮಾಚರಸ, ವಾಸುದೇವ, ಸಾಂಯಕ್ಕ

ಪದ್ಮನಾಭ ಎಂಬ ಮಕ್ಕಳಿದ್ದ ವಿಷಯ ವಾಸುದೇವನು ನಿಬ್ಬರವೆ ೭೦ ರಲ್ಲಿಯ ಮುಕ್ಕುಂದೆಯಲ್ಲಿದ್ದಂತೆ ತಿಳಿಸಲಾಗಿದೆ. ಮಧುಸೂಧನನು ಕರಡಿಕಲ್ ೩೦೬ರ ಬನ್ನಿಗೋಳವನ್ನು ಆಳುತ್ತಿದ್ದ ಮಧುಸೂಧನನು ತನ್ನ ತಂದೆಯ ಹೆಸರಿನಲ್ಲಿ ರೂಡಿಯಲ್ಲಿ ವಾಸುದೇವ ದೇವಾಲಯವನ್ನು ಕಟ್ಟಿಸಿ ಭೂಮಿ ದಾನ ಬಿಡುವ ವಿಷಯ ತಿಳಿದು ಬರುತ್ತದೆ.

ಬೇವಿನೂರಿನ ಈತನ ಕಾಲದ ಶಾಸನದಲ್ಲಿ ಅಣ್ಣಲದೇವ ಭತ್ತಗ್ರಾಮ ಬೇವಿನಹಾಳ ಮತ್ತು ಪಿರಿಯ ಕೋಲಿನ ಉಲ್ಲೇಖವಿದೆ.

ಇದೇ ಗ್ರಾಮದ ಗುಡಿಯಲ್ಲಿರುವ ಸುಮಾರು ಕ್ರಿ.ಶ.೧೧೨೩ರ ಶಾಸನದಲ್ಲಿ ಆರನೇ ವಿಕ್ರಮಾದಿತ್ಯನು ಜಯಂತಿಪುರದ ನೆಲೆವೀಡಿನಿಂದ ಆಳುತ್ತಿದ್ದಾಗ ಅವನ ಸೀಮಾಂತ ಕುಮಾರ ತೈಲಪನ ಮತ್ತು ಮಹಾಪ್ರಧಾನ ದಂಡನಾಯಕ ನಿಂಬಣ್ಣಯ ತಾನು ಹಿಂದೆ ಡಾ.ಚಂದ್ರಶೇಖರ ಭಟ್ಟರಿಗೆ ನೀಡಿದ ಭೂಮಿಯನ್ನು ಮರಳಿ ಪಡೆದು ಅರ್ಧವನ್ನು ಕೊಮ್ಮಣಯ್ಯನಿಗೆ ಇನ್ನರ್ಧಭಾಗವನ್ನು ದೇವರಿಗೆ ಬಿಡುವನು ಎಂದು ತಿಳಿಯುತ್ತದೆ

ಕಲ್ಲೂರಿನ ಕ್ರಿ.ಶ.೧೦೮೦ರ ಆರನೇ ವಿಕ್ರಮಾದಿತ್ಯನ ಶಾಸನವು ಈತನ ಮಾಂಡಳಿಕನಾದಾ ಬೂಚಿದೇವರಸ ಮಹಾಪ್ರಧಾನ ತಂತ್ರಪಾಳನಾದ ಕಣನು ಮತ್ತು ಹೆಗಡೆ ಚವುಡಣನು ಸೇರಿ ಬೂಚಿದೇವನ ಆದೇಶದಂತೆ ಕಲ್ಲೂರಿನ ಅಗ್ರಾಹಾರವಾದ ಸ್ವಯಂಭೂ ಮಾರಬೇಶ್ವರ ದೇವರಿಗೆ ದಾನ ಬಿಟ್ಟಂತೆ ಹೇಳಿದೆ.

ಅದೆ ರೀತಿಯಾಗಿ ಕಲ್ಲುರಿನ ಕ್ರ.ಶ.೧೧೯೬ ಶಾಸನವು ೬ನೇ ವಿಕ್ರಮಾದಿತ್ಯನು ನರ್ಮದಾದೇವಿಯ ದಂಡಿನ ನೆಲೆವೀಡಿನಲ್ಲಿದ್ದಾಗ ತನ್ನ ವಿದ್ಯಾಗುರುಗಳಾದ ಸರ್ವಕ್ರತು ಸೋಮಯಾಜಿಗೆ ನರ್ಮದಾನದಿಯ ಬಳಿ ಈತ ಮಾಡಿದ ಪಂಚಲಾಂಗೂಲ ಕ್ರತುವಿಗಾಗಿ(ಯಾಗಕ್ಕಾಗಿ ಕಲ್ಲೂರನ್ನೂ ದಾನವಾಗಿ ಕೊಟ್ಟಿರುವುದನ್ನು ಹೇಳಿದೆ.

ಇದೇ ಸಂದರ್ಭದಲ್ಲಿ ಬರೆಯಿಸಿದ ಬಾಗಲವಾಡದ ಕ್ರಿ.ಶ.೧೧೯೬ರ ಶಾಸನವು ಈತನ ಕಾಲದ್ದಾಗಿದ್ದು ಇವನ ಸಾಮಂತನಾಗಿದ್ದ ಹೈಹಯ ವಂಶೋದ್ಭವನಾದ ಅಯ್ಯಣ ಎಂಬುದವನು ಬರ್ಮುಳಹಾಳ ಗ್ರಾಮದ ಪ್ರಭು ಗಾವುಂಡರಿಗೆ ಕೆಲವು ತೆರಿಗೆಗಳನ್ನು ಮತ್ತು ಭೂಮಿಯನ್ನು ದಾನವಾಗಿ ಬಿಟ್ಟಿರುವುದರ ಜೊತೆಗೆ ವಿಶೇಷವೆಂದರೆ ಈ ಶಾಸನದಲ್ಲಿ ತ್ರಿಭುವನಮಲ್ಲನ ರಾಣಿ (೬ನೇ ವಿಕ್ರಮಾದಿತ್ಯನ) ಮಲಯಮೆಲೆಯು ಪಿರಿಯರಸಿ ಎಂಬುದನ್ನು ಉಲ್ಲೇಖಿಸಿದೆ.

ತುಪ್ಪದೂರಿನ ಹುಡೆಯದ ಮೇಲೆ ನಿಲ್ಲಿಸಿರುವ ೧೧-೧೨ನೇ ಶತಮಾನದ ತ್ರುಟಿತವಾಗಿರುವ ವಿಕ್ರಮಾದಿತ್ಯನಕಾಲದ ಈ ಶಾಸನವು ಅಗ್ರಹಾರ ತೆನೆಯ...ಯಲ್ಲಿ ದೇವರನ್ನು ಪ್ರತಿಷ್ಠಾಪಿಸಿದಂತೆ ತೋಟವನ್ನು ದಾನ ನೀಡಿದಂತೆ ಹೇಳಿದೆ.

ಮಲ್ಲಟದ ಊರ ಹೊರಗಿನ ಅಲ್ಲಮನ ದೇವಾಲಯದ ಹೊರಗೆ ನಿಲ್ಲಿಸಿರುವ ೧೧೯೬ರ ಶಾಸನವು ೬ನೇ ವಿಕ್ರಮಾದಿತ್ಯನ ಕಾಲದ ಈ ಶಾಸನವು ಈತನ ಮಹಾಮಂಡಳೇಶ್ವರನಾದ ಮೊರಟದ ಮಲ್ಲನ

ಈತನ ಕುಟುಂಬದ ಸದಸ್ಯರ ವಿವರಗಳು ಸಂಕ್ರಾಂತಿಯ ಹಬ್ಬದ ನಿಮಿತ್ತ ಮೊರಟದ ಸಪ್ತನಾಥದೇವರ ಸೇವಕನಾದ ಆವುಜದ ಮೊಳಯನು ದೇವಂ ಪ್ರಾತಿಷ್ಠ ಮಾಡಿ ಕೆಲವು ವ್ಯಕ್ತಿಗಳ ಹೆಸರಿಸಿದೆ.

ಕ್ರಿ.ಶ.೧೦೯೭ರಲ್ಲಿ ವಿಕ್ರಮಾದಿತ್ಯನು ಮಂಡಳೇಶ್ವರನಾಗಿ ಮೊರಟದಲ್ಲಿ (ಮಲ್ಲಟ) ಮಲ್ಲಿರೇವ ಆಳುತ್ತಿದ್ದ ಇವನು ಹೈಹಯ ವಂಶದವನು. ಇವನು ಯುದ್ಧವೊಂದರಲ್ಲಿ ಹೋರಾಡಿ ೧೨೦೦ ತಲೆಗಳನ್ನು ರಾಸಿ ಮಾಡಿ ಜಯವನ್ನು ಪಡೆದಂತೆ ಹೇಳಿದೆ. ಇದೇ ಶಾಸನದಲ್ಲಿ ಸತಳೇಶ್ವರ ದೇವರ ಮಾದಿರಾಜಯ್ಯನ ಹೆಸರಿನಲ್ಲಿ ದೇವರ ಪ್ರತಿಷ್ಠೆ ಮಾಡಿದಂತೆ ಹೇಳಲಾಗಿದೆ.

ಬಿಲ್ಹಣ ವಿಜ್ಞಾನೇಶ್ವರರು ಇವನ ಆಸ್ಥಾನದಲ್ಲಿ ವಿದ್ವಾಂಸರು ಈತನ ಸೋದರ ಕೀರ್ತಿವರ್ಮ 'ಗೋವೈದ್ಯ'ವನ್ನು ಕನ್ನಡದಲ್ಲಿ ಬರೆದ. ವಿಕ್ರಮನ ಪ್ರಧಾನ ರಾಣಿ ಚಾಂದಲದೇವಿ ನೃತ್ಯ, ಸಂಗೀತಾದಿ ಕಲೆಗಳಲ್ಲಿ ಪರಿಣಿತಳಾಗಿ "ಅಭಿನವ ಸರಸ್ವತಿ" ಎನಿಸಿದ್ದಳು.

ತ್ರಿಭುವನಮಲ್ಲ, ಭೂಲೋಕಮಲ್ಲ, ಸರ್ವಜ್ಞ ಚಕ್ರವರ್ತಿ ಮುಂತಾದ ಬಿರುದುಳ್ಳ ಮೂರನೇ ಸೋಮೇಶ್ವರ ತನ್ನ ತಂದೆಯಾದ ೬ನೇ ವಿಕ್ರಮಾದಿತ್ಯನ ಮರಣದ ತರುವಾಯ ೧೧೨೭ರಲ್ಲಿ ಪಟ್ಟವೇರಿದ. ಈತನ ಆಳ್ವಿಕೆಯ ಕಾಲದ ಶಾಸನಗಳು ಈ ಭಾಗದಲ್ಲಿ ದೊರೆತಿವುರುದು ವಿರಳ ಎಂದೇ ಹೇಳಬಹುದಾಗಿದೆ. ಕ್ರಿ.ಶ.೧೧೩೪ರ ಕುರುಡಿ ಶಾಸನದ ಮೂಲಕ ಈತನ ಆಳ್ವಿಕೆಗೆ ಕಾಲದಲ್ಲಿ ಸೋಮಭಟ್ಯೋಪಾಧ್ಯಾಯರ ಮಕ್ಕಳಾದ ನಾರಾಯಣ ಭಟ್ಟೋಪಾಧ್ಯಯರು ಅಗ್ರಹಾರ ರೂಢಿಯ ಮಹಾಜನರಿಗೆ ತಿಂಗಳಿಗೆ ಇಂತಿಷ್ಟು ಎಂದು ಹೊನ್ನಗದ್ಯಾಣವನ್ನು ದಾನ ಮಾಡಿದ ವಿಷಯ ತಿಳಿಯುತ್ತದೆ.

ಇದೇ ರೀತಿ ಇದೇ ಊರಿನ ಈಶ್ವರ ಗುಡಿಯಲ್ಲಿರುವ ಕ್ರಿ.ಶ.೧೧೩೭ರ ಕುರುಡಿಯ ಶಾಸನವು ಈತನ ಆಳ್ವಿಕೆಯನ್ನು ಉಲ್ಲೇಖಿಸುವುದರ ಜೊತೆಗೆ ಈತನ ಮಹಾಪ್ರಧಾನ ನಿಂಬಣಯ್ಯನ ಮಗಳು ದಾನ ಕೊಟ್ಟ ವಿವರ ಇದೆ. ಇಬ್ಬರು ಹೆಣ್ಣು ಮಕ್ಕಳಾದ ನಾಗಲದೇವಿ ಗಂಗಣಬ್ಬೆ ಇವರಿಬ್ಬರನ್ನು ಶಂಕರಾಯ್ಯನಿಗೆ ಹಾಗೂ ಅವನ ತಮ್ಮ ಮಹಾದೇವನಿಗೆ ಮದುವೆ ಮಾಡಲಾಗಿತ್ತು ಎಂಬ ವಿಷಯ ತಿಳಿದು ಬರುತ್ತದೆ. ಇಲ್ಲಿ ನಾಗಲದೇವಿಯು ತನಗೆ ಬಳುವಳಿಯಾಗಿ ಕೊಟ್ಟ ತೈಲಪ ದೇವರ ಅಗ್ರಹಾರ ರಾರಾವಿಯಲ್ಲಿ ಬಂದ ವೃತ್ತಿಯಲ್ಲಿ ಅರ್ಥ ವೃತ್ತಿಯನ್ನು ರೂಢಿಯ ಶಂಕರೇಶ್ವರ ನಾಗೇಶ್ವರ ದೇವರಿಗೆ ದಾನ ಕೊಟ್ಟ ವಿಷಯ ತಿಳಿಯುತ್ತದೆ.

ಕುಟುಂಬದ ವೈವಾಹಿಕ ಜೀವನದ ಮಾಹಿತಿಯನ್ನು ವೃತ್ತಿಯ ಬಗ್ಗೆ ಗೌರವ ಆಧರಗಳನ್ನು ಇಲ್ಲಿ ಸ್ತ್ರೀಯರು ನಡೆಸಿಕೊಂಡಿರುವ ವ್ಯಕ್ತಿತ್ವದ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.

ಈತನ ಕಾಲದ ಇನ್ನೊಂದು ಶಾಸನ ಕಲ್ಲೂರಿನ ಕ್ರಿ.ಶ.೧೧೩೪ರ ಮಾರುತೇಶ್ವರ ದೇವಾಲಯದ ಎಡಭಾಗದ ಗೋಡೆಯ ಮೇಲೆ ನಿಲ್ಲಿಸಿರುವ ಶಾಸನದಿಂದ ಈತನು ಕಲ್ಯಾಣದಿಂದ ರಾಜ್ಯಭಾರ ಮಾಡುತ್ತಿದ್ದಾಗ, ಅವನ ಮಾಂಡಳಿಕ ಬೂಚಿದೇವರಸನು ಮುದುಗುಂದೂರು-೩೦೦ನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ಎಂಬ ವಿಷಯ ತಿಳಿದು ಬರುತ್ತದೆ. ಇದರಿಂದ ತಿಳಿಯುವ ವಿಷಯವೆಂದರೆ ಕೆಲವೊಬ್ಬ ದಂಡನಾಯಕರು, ಮಾಂಡಳಿಕರು ಸ್ವತಂತ್ರರಾಗಬಯಸಿದ್ದರು ಎಂಬ ವಿಷಯ ತಿಳಿದುಬರುತ್ತದೆ. ಈತನು ತಂದೆಯಂತೆ ಸಮರ್ಥನಾಗಿರಲಿಲ್ಲವಾದರೂ ಈತ ಗ..

ವಿದ್ವಾಂಸನಾಗಿದ್ದ ಎಂಬುದಕ್ಕೆ 'ಮೊನಸೋಲ್ಲಾಸ' ಎಂಬ ವಿಶ್ವಕೋಶ 'ವಿಕ್ರಮಾಂಕಾಬ್ಯುದಯ' ಎಂಬ ಕಾವ್ಯಗಳನ್ನು ಈತನೇ ಬರೆದನೆಂದು ತಿಳಿದು ಬರುತ್ತದೆ.

ಈತನ ನಂತರ ಮಗ ಎರಡನೆಯ ಜಗದೇಕಮಲ್ಲ ಕ್ರಿ.ಶ.(೧೧೩೯-೧೧೪೯)ರವರಗೆ ಆಳ್ವಿಕೆ ಮಾಡಿದನು. ಪಟ್ಟವೇರಿದಾಗ ಈತನಿಗೆ ಆಗಲೇ ವಯಸ್ಸಾಗಿತ್ತು. ಸುತ್ತ ಮುತ್ತ ಎಲ್ಲೆಲ್ಲೂ ಸಾಮಂತರು ವಶಪಡಿಸಿಕೊಂಡರೆ ಇನ್ನು ಕೆಲವರು ಸ್ವತಂತ್ರರಾಗಲು ಹವಣಿಸುತ್ತಿದ್ದರು ಎಂಬ ವಿಷಯ ತಿಳಿದು ಬರುತ್ತದೆ.

ಕಲ್ಯಾಣ ಚಾಲುಕ್ಯರ ನಂತರ ಇವರ ಮುಖ್ಯ ಸಾಂಮತರಾಜುರುಗಳಲ್ಲಿ ಕಲಚೂರಿಗಳು ಒಬ್ಬರಾಗಿದ್ದಾರೆ. ಇವರು ಕರ್ನಾಟಕ ಇತಿಹಾಸದಲ್ಲಿ ಬೆಳಕಿಗೆ ಬಂದಿದ್ದು ೧೨ನೇ ಶತಮಾನದ ಮಧ್ಯಭಾಗದಲ್ಲಿ. ಇವರ ಆಡಳಿತಾವಧಿ ಅಲ್ಪಕಾಲದ್ದಗಿತ್ತು. ಇವರಿಗೆ ಸಂಬಂಧಿಸಿದಂತೆ ದೊರಕುವ ಆಧಾರಗಳೆಂದರೆ ಶಾಸನಗಳು. ಇವು ಕರ್ನಾಟಕದ ಚಿತ್ರದುರ್ಗ, ಶಿವಮೊಗ್ಗ ಧಾರವಾಡ, ಬಿಜಾಪುರ, ಗುಲ್ಬರ್ಗಾ, ರಾಯಚೂರು ಮತ್ತು ಬೀದರ ಜಿಲ್ಲೆಗಳಲ್ಲೂ ಮಹಾರಾಷ್ಟ್ರ ರಾಜ್ಯದ ಸೋಲ್ಲಾಪುರ ಮತ್ತು ನಂದೇಡ್ ಜಿಲ್ಲೆಗಳಲ್ಲೂ ಕಂಡುಬರುತ್ತದೆ. ಕಲಚೂರಿಗಳ ಇತಿಹಾಸವನ್ನು ಸೂಚಿಸುವ ಸಾಹಿತ್ಯದ ಮೂಲ ಕನ್ನಡ ಹಾಗೂ ಸಂಸ್ಕೃತಗಳಲ್ಲಿವೆ. ಉದಾ: ಬಸವೇಶ್ವರನ ವಚನಗಳು, ವಿರುಪಾಕ್ಷ ಪಂಡಿತನ ಚನ್ನಬಸವ ಪುರಾಣ ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ(ತೆಲುಗು)

ಕಲಚೂರಿಯರಿಗೆ ಸಂಬಂಧಿಸಿದಂತೆ ಗೋಗಬಾಳದಲ್ಲಿ ದೊರೆತ ಕ್ರಿ.ಶ.೧೧೭೪ರ ಶಾಸನದಲ್ಲಿ ಈ ವಂಶದ ಚಕ್ರವರ್ತಿ ರಾಯಮುರಾರಿ ಸೋವಿದೇವನು ಆಳುತ್ತಿದ್ದ. ಈತನು ಊರ ದೇವರಿಗೆ ದಾನ ಬಿಟ್ಟ ವಿಷಯ ಉಲ್ಲೇಖಿಸುತ್ತದೆ.

ಇವರ ನಂತರ ಕಲ್ಯಾಣ ಚಾಲುಕ್ಯರ ನಾಲ್ಕನೇ ಸೋಮೇಶ್ವರನು ಪಟ್ಟಕ್ಕೆ ಬರುತ್ತಾನೆ. ಕ್ರಿ.ಶ.೧೧೯೧ರ ಹಿರೇಕೊಟ್ನೆಕಲ್ ಶಾಸನದಲ್ಲಿ ಈ ಸೋಮೇಶ್ವರ ಉಕ್ತನಾಗಿದ್ದಾನೆ. ಹೈಹಯ ವಂಶದ ಮಲ್ಲಿದೇವನು ಇವನ ಮಾಂಡಳೇಶನಾಗಿ ರಾಜ್ಯಭಾರ ಮಾಡುತ್ತಿದ್ದ. ಮಾನುವೆಯಲ್ಲಿ ಮೈಳುಕಿದೇವನು ಆಳುತ್ತಿದ್ದ ವಿಷಯ ತಿಳಿದು ಬರುತ್ತದೆ. ಹೀಗೆ ಕಲಚೂರಿಯರ ಕಾಲದ ಶಾಸನಗಳು ಬಹಳಷ್ಟು ಸಿಕ್ಕುವುದಿಲ್ಲವಾದರೂ ದೊರೆತಿರುವ ಎರಡು ಮೂರು ಶಾಸನಗಳಿಂದ ಇವರ ಆಳ್ವಿಕೆಯನ್ನು ಗುರುತಿಸಲು ಸಾಧ್ಯವಾಗಿದೆ.

ಇವರ ಆಂತರಿಕ ಕಚ್ಚಾಟ ಒಳಜಗಳಗಳಿಂದಾಗಿ ಇವರ ಪ್ರಾಬಲ್ಯ ಕಡಿಮೆಯಾಗಿ ಶಿವಶರಣರ ಆಂದೋಲನಗಳ ಪರಿಣಾಮವಾಗಿ ನಿರ್ನಾಮವಾಯಿತು ಎಂದು ತಿಳಿದು ಬರುತ್ತದೆ. ಚಾಲುಕ್ಯ ವಂಶದ ಕೊನೆಯ ಅರಸನೆಂದು ಬಿಂಬಿತನಾದ ನಾಲ್ಕನೇ ಸೋಮೇಶ್ವರನು ಮರಳಿ ಅಧಿಕಾರಕ್ಕೆ ಬಂದರೂ ಚಾಲುಕ್ಯ ಸಾಮ್ರಾಜ್ಯದ ಆಡಳಿತವನ್ನು ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗದೇ ವಿಫಲನಾದನು. ಇವನ ನಂತರ ೩ನೇ ತೈಲಪನು ಆಡಳಿತ ಚುಕ್ಕಾಣಿ ಹಿಡಿದರೂ ಸ್ಪರ್ಧಾತ್ಮಕವಾಗಿತ್ತು. ಕಾರಣ ಸೇವುಣರು ಮತ್ತು ಹೊಯ್ಸಳರು ಪ್ರತಿ ಸ್ಪರ್ಧಿಗಳಾಗಿದ್ದರು. ಈತನ ಕಾಲದಲ್ಲಿ ಚಾಲುಕ್ಯ ಸಾಮ್ರಾಜ್ಯ ಅವನತಿ ಹೊಂದಿತು.

ಚಾಲುಕ್ಯರ ನಂತರ ಕ್ರಿ.ಶ.೧೨ನೇ ಶತಮಾನದಲ್ಲಿ ಉತ್ತಾರಾರ್ಧದಲ್ಲಿ ಬೆಳಕಿಗೆ ಬಂದರಾದರೂ ಎರಡು ಶತಮಾನಗಳ ಹಿಂದೆಯೇ ಅವರ ರಾಜಕೀಯ ಆಡಳಿತ ಪ್ರಾರಂಭವಾಗಿತ್ತು. ಅಂದರೆ ಸುಮಾರು ೧೦ನೇ ಶತಮಾನದಲ್ಲಿ ಈ ಭಾಗದಲ್ಲಿ ಅವರ ಆಳ್ವಿಕೆಗೆ ಸಂಬಂಧಿಸಿದ ಶಾಸನಗಳು ಸಿರಿವಾರ, ಕವುತಾಳಗಳಲ್ಲಿ ದೊರಕಿವೆ. ಸಿರಿವಾರ ಈಶ್ವರ ದೇವಾಲಯದ ಹೊರೆಗೆ ಇರುವ ಶಾಸನದ ಮೂಲಕ ಪ್ರತಾಪ ಚಕ್ರವರ್ತಿ ಸಿಂಹಣದೇವನ ಉಲ್ಲೇಖ ಬಂದಿದೆ. ದೇವಗಿರಿಯ ಯಾದವ ವಂಶದ ಸಿಂಹಣನಿರಬಹುದೆಂದು ಊಹಿಸಲಾಗಿದೆ. ಈತನು ಜೈತುಗಿಯ ಮಗ ಭಿಲ್ಲಮನ ಮೊಮ್ಮಗನಾಗಿದ್ದನೆಂದು ತಿಳಿದು ಬರುತ್ತದೆ.

ಕವುತಾಳ ಕ್ರಿ.ಶ.೧೨೧೭ರ ಶಾಸನವು ಸೇವುಣ ಸಿಂಗಣನು ದೇವಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಅವನ ಸಾಮಂತ ಹೈಹಯ ವಂಶದ ಮಲ್ಲಿದೇವರಸನಿದ್ದ ಈತನನ್ನು ೪ ಭಾಷೆಯ ಗಂಡ ಮುಂತಾಗಿ ಕರೆದಿದೆ. ಈತನ ಅಧೀನದಲ್ಲಿ ಬೇಚಿಸೆಟ್ಟಿ ರೇಚಿಸೆಟ್ಟಿಯೆಂಬುವರು ಪಲ್ಲೇಶ್ವರದೇವರಿಗೆ ಭೂದಾನ ನೀಡುವ ವಿವರವಿದೆ.

ಕವುತಾಳದ ಅದೇ ದೇವಾಲಯದ ಒಗಳಿರುವ ಶಾಸನದ ಮೂಲಕ ಇದು ಯೋಧ ಚಕ್ರವರ್ತಿ ಸಿಂಗಣದೇವನ ಕಾಲಕ್ಕೆ ಸೇರಿದ್ದು ಈತನ ಸಾಮಂತ ಇಮ್ಮಡಿ ಮಲ್ಲಿದೇವನನ್ನು ಉಲ್ಲೇಖಿಸುತ್ತದೆ. ಪ್ರಾರಂಭದಲ್ಲಿ ಸಿಂಗಣದೇವನನ್ನು ಹೋಗಳುವ ಪದ್ಯಗಳಿವೆ. ಇವನು ದೇವಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಂತೆ ಹೇಳಿದೆ. ಇವನು ಐಯಣ ಸಿವುರದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಇವನ ಕೈಕೆಳಗೆ ಬೇಚಿಸೆಟ್ಟಿ ಈತನನ್ನು ಚಾಲುಕ್ಯನ್ವಯನೆಂದೂ ಮೊರಟ ೩೦೦ರ ಸೆಟ್ಟಿಗುತ್ತನೆಂದು ಇವನ ತಮ್ಮ ರೇಚಿಸೆಟ್ಟಿ ಇವರಿಬ್ಬರೂ ತಂದೆಯ ಹೆಸರಿನಲ್ಲಿ ಲಿಂಗ ಪ್ರತಿಷ್ಠೆ ಮಾಡಿ ತ್ರಯಂಬಕದೇವರಿಗೆ ಭೂದಾನ ನೀಡುತ್ತಾರೆ. ಉಳಿದ ಸೆಟ್ಟಿಗುತ್ತರು ನಾನಾದೇಸಿಗಳು ಕವುತಾಳ ಸಮಸ್ತ ಪ್ರಜೆಗಳು ಬೇರೆ ಬೇರೆ ದಾಸನಗಳನ್ನು ನೀಡುತ್ತಾರೆ. ಎನ್ನುವ ವಿಷಯ ಕವುತಾಳದ ಈ ಶಾಸನದಿಂದ ತಿಳಿದು ಬರುತ್ತದೆ.

ಸುಂಕೇಶ್ವರದ ಎರಡು ಶಾಸನಗಳಿಂದ ಮಹಾಮಂಡಳೇಶ್ವರ ಮಲ್ಲಿದೇವನ ಉಲ್ಲೇಖವಿದ್ದು ಭೂಮಿ ದಾನ ನೀಡಿದಂತೆ ತಿಳಿಸುತ್ತದೆ. ಇವರ ಕುರಿತು ಈ ಭಾಗದಲ್ಲಿ ಹೆಚ್ಚಿನ ಮಾಹಿತಿ ಕಂಡುಬರುವುದಿಲ್ಲ ಇವರ ನಂತರ ವಾರಂಗಲ್ಲಿನ ಕಾಕತಿಯರು ಹೊಯ್ಸಳರು ಆಳ್ವಿಕೆ ನಡೆಸಿದರು ಇವರ ಕುರಿತು ಯಾವುದೇ ಮಾಹಿತಿ ಕಂಡುಬರುವುದಿಲ್ಲ. ಇವರ ವಿಜಯನಗರ ಅರಸರು ಇವರು ದಕ್ಷಿಣ ಭಾತದಲ್ಲಿ ತಮ್ಮ ಪ್ರಾಬಲ್ಯವನ್ನು ಮೆರೆದಿದ್ದಾರೆ.

## ವಿಜಯ ನಗರದ ಅರಸರು

ದೆಹಲಿ ಸುಲ್ತಾನರ ಸೇನೆಗಳ ದಾಳಿಯಿಂದಾಗಿ ಕರ್ನಾಟಕದ ಅರಸು ಮನೆತನಗಳ ಪತನಗೊಂಡು ದಕ್ಷಿಣ ಭಾರತದಲ್ಲಿ ಒಂದು ಪ್ರಬಲ ಕೇಂದ್ರಸತ್ತೆಯೊಂದು ಇಲ್ಲಿ ನಿರ್ವಾತ ಸ್ಥಿತಿ ಉದ್ಭವಿಸಿತು ಇವರ ದಾಳಿಯಿಂದಾಗಿ ಪರಂಪರಾಗತವಾದ ಧಾರ್ಮಿಕ ಮೌಲ್ಯಗಳಿಗೆ ಧಕ್ಕೆ ಉಂಟಾಗಿದ್ದಲ್ಲದೆ ಜನರಿಗೆ

ಪ್ರಬಲ ಶಕ್ತಿಯಿಲ್ಲದೆ ದಿಕ್ಕುತಪ್ಪುವಂತಾಗಿ ಅರಾಜಕತೆ ಉಂಟಾದ ಸಂದರ್ಭದಲ್ಲಿ ಹಿಂದೂ ಧರ್ಮಕ್ಕೆ ಪುನಶ್ಚೇತನ ತುಂಬಲು ಎಂಬಂತೆ ಉದಯಿಸಿದ ವಿಜಯನಗರ ಸಾಮ್ರಾಜ್ಯ ತುಂಗಭದ್ರೆಯ ದಕ್ಷಿಣದ ಇಡೀ ಭಾಗವನ್ನು ಒಂದು ಗೂಡಿಸಿ ಏಕ ಚಕ್ರಾಧಿಪಾತ್ಯಕ್ಕೆ ಒಳಪಡಿಸಲು ಹಿಂದೂ ಧರ್ಮ ಜೀವನಮೌಲ್ಯಗಳಿಗೆ ಸಾಹಿತ್ಯ ಕಲೆ ವಾಸ್ತು ಶಿಲ್ಪಕ್ಕೆ ತನ್ನದೇ ಆದ ಕೊಡುಗೆ ನೀಡಿ ಎಂದೂ ಮರೆಯಲಾಗದ ಸಾಮ್ರಾಜ್ಯವೆಂದೇ ಪ್ರಾಖ್ಯಾತಿ ಪಡೆದುಕೊಂಡಿತು.

ಇಂತಹ ಸಾಮ್ರಾಜ್ಯದಡಿಯಲ್ಲಿ ಈ ಭಾಗ ಒಳಪಟ್ಟಿರುವುದು ಶಾಸನಗಳಿಂದ ಧೃಢಪಟ್ಟಿದೆ. ಕೃಷ್ಣದೇವರಾಯನ ಮತ್ತು ರಾಮರಾಯನ ಇವರಿಬ್ಬರ ಕುರಿತಾದ ಶಾಸನಗಳು ಮಾನ್ವಿ, ಚೀಕಲಪರ್ವಿ, ಕವುತಾಳಗಳಲ್ಲಿ ಕಂಡುಬಂದಿವೆ.

ರಾಯಚೂರು ಜಿಲ್ಲೆಯ ಇತಿಹಾಸದಲ್ಲಿ ವಿಜಯನಗರದ ಅರಸರ ಆಳ್ವಿಕೆಯು ಬಹುಮುಖ್ಯವಾದ ಘಟ್ಟ. ಒಂದೆಡೆ ವಿಜಯನಗರ ಇನ್ನೊಂದೆಡೆ ಬಹುಮುನಿ ಮನೆತನಗಳು ಇಲ್ಲಿಯ ಫಲವತ್ತಾದ ಪ್ರದೇಶಕ್ಕಾಗಿ ಹಲವಾರು ಯುದ್ಧಗಳನ್ನು ಮಾಡಿದವು. ಸುಮಾರು ೧೩ ಯುದ್ಧಗಳಿಂದ ಕೂಡಿರುವ ಈ ನೆಲೆ ಒಂದು ರಣರಂಗವಾಗಿಯೇ ಮಾರ್ಪಾಟ್ಟಿತು. ಈ ಜಿಲ್ಲೆಯ ಮುದುಗಲ್ಲು ೨ನೇ ದೇವರಾಯನ ಅಧೀನದಲ್ಲಿತ್ತು.

ನಂತರ ಕೃಷ್ಣದೇವರಾಯನ ಕಾಲಕ್ಕೆ ಆತನ ಘನತೆಯನ್ನು ಹೆಚ್ಚಿಸಿದುವೆ ರಾಯಚುರು ಅಂದು ಪ್ರಬಲವೆನಿಸಿದ್ದ ಇಸ್ಮಾಯಿಲ್ ಆದಿಲ್‌ಷಾಹನನ್ನು ಕ್ರಿ.ಶ.೧೫೨೦ರಲ್ಲಿ ಹೋಡಿಸಿ ರಾಯಚುರು ಕೋಟೆಯನ್ನು ವಶಪಡಿಸಿಕೊಂಡನು. ಅದೇ ಸಂದರ್ಭದಲ್ಲಿ ಮಾನುವೆ (ಮಾನ್ವಿ) ಹಾನಗಲ್ಲು, ಆಲಂಪೂರ, ರಾಚೂರು, ಮಾಗಡೆ ಮಾರ್ಗಗಳನ್ನು ಗೆದ್ದು ಕೂಡಲೂರು ಸಂಗಮಕ್ಕೆ ಬಂದು ಭೀಮಾ ಮತ್ತು ಕೃಷ್ಣ ನದಿಗಳ ಸಂಗಮಸ್ಥಳಗಳಲ್ಲಿ 'ರತ್ನಧೇನು' ಮಹಾದಾನವನ್ನು ಮಾಡಿ ತನ್ನ ಹೆಂಡತಿ ಚಿನ್ನಾದೇವಿಯಿಂದ ಗೋಧಾನವನ್ನು ಇನ್ನೋರ್ವ ಮಡದಿ ತಿರುಮಲ ದೇವಿಯಿಂದ ಕನಕದಾನವನ್ನು ಮಾಡಿಸಿ, ಮಾನುವೆ ಸೀಮೆಯ ಚೀಲಪರ್ವಿಯನ್ನು ತಿರುವೆಂಗಳನಾಥ ದೇವರಿಗೆ ದಾನ ನೀಡಿದನೆಂದು ಚೀತಕಲಪರ್ವಿಯ ಕ್ರಿ.ಶ.೧೫೨೧ ರ ಶಾಸನದಿಂದ ತಿಳಿದು ಬರುತ್ತದೆ.

ಕವಿತಾಳದ ಕ್ರಿ.ಶ.೧೫೫೧ರ ಶಾಸನದ ಮೂಲಕ ವಿಜಯ ನಗರದ ದೊರೆ ಸದಾಶಿವರಾಯನ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ರಾಮರಾಯನ ಉಲ್ಲೇಖ ಮಾತ್ರ ಬರುತ್ತದೆ.

ಅದೇ ರಿತಿಯಾಗಿ ಮಾನ್ವಿಯ ಜೀನಗಾರಬಂಡೆ ದಿಬ್ಬದ ಹತ್ತಿರವಿರುವ ಕ್ರಿ.ಶ.೧೫೫೩ರ ಶಾಸನದಿಂದ ವಿಜಯನಗರದ ದೊರೆ ಸದಾಶಿವರಾಯನು ಆಳುತ್ತಿದ್ದಾಗ ಅವನ ಮಹಾಮಂಡಳೇಶ್ವರನಾಗಿದ್ದ ರಾಮರಾಯದೇವನು ಸದಾಶಿವದೇವನಿಗೆ ಪುಣ್ಯವಾಗಲಿಯೆಂದು ತಿಂಮ್ಮೊಜ ಕೊಂಡೋಜ ಮತ್ತು ಭದ್ರೋಜರ ವಿನಂತಿಯ ಮೇರೆಗೆ ರಾಯಚೂರು ಸೀಮೆಗೆ ಸೇರಿದ ಊರಿಗೆ (ಹೆಸರು ಸ್ಪಷ್ಟವಿಲ್ಲ) ಸೀಮೆಯ ನಾವಿದ ಸುಂಕವನ್ನು ದಾನ ಬಿಟ್ಟಂತೆ ಹೇಳಿದೆ.

ಒಂದು ಕಡೆ ಅಂತ್ಯ ಜಾತಿಯವರಿಗೆ ಸಾಮಾಜಿಕ ಬಹಿಷ್ಕಾರ ವಿಧಿಸಿದರೆ ಮತ್ತೊಂದೆಡೆ ನಾಯಿಂದ ಜಾತಿಯವರಿಗೆ ಪುರಸ್ಕಾರ ಸ್ಥಾನಮಾನ ಕಲ್ಪಿಸಿಕೊಟ್ಟ ವಿಚಾರ ಮಸ್ಕಿ ಮತ್ತು ಮಾನುವೆಯ ಶಾಸನಗಳು

ವಿವರಿಸುತ್ತವೆ. ವಿಜಯನಗರದ ಸದಾಶಿವರಾಯನಿಗೆ ಸಂಬಂಧಿಸಿದ ಎರಡೂ ಶಾಸನಗಳು ಬೇರೆ ಬೇರೆ ಕಾಲದಲ್ಲಿ ಬರೆದಿವೆ. (ಕೃಷ್ಣ ತುಂಗೆ ನೆಲದಸಿರಿ ಶಾಸ್ತ್ರಿಸ್ವಾಮಿ ಮುಕ್ಕುಂದಿಮಠ-೨೦೦೮ ಪುಟ-೬೧ ಸಮುಖ ಪ್ರಕಾಶನ ಬೆಂಗಳೂರು) ವಿಜಯನಗರ ಅರಸರಲ್ಲಿ ಮತ್ತು ದಕ್ಷಿಣ ಭಾರತವನ್ನು ಆಳಿದ ಸಾಮ್ರಾಟರಲ್ಲಿಯೇ ಶ್ರೇಷ್ಠನಾದ ಶ್ರೀಕೃಷ್ಣದೇವರಾಯ ಆಳ್ವಿಕೆಗೆ ಒಳಪಟ್ಟಿರೆ ಮತ್ತೊಂದೆಡೆ ಇಡೀ ಸಾಮ್ರಾಜ್ಯ ನಾಶವಾಗಲು ಕಾರಣದ ಅಳಿಯ ರಾಮರಾಯನ ಕಾಲದ ಆಳ್ವಿಕೆಗೂ ಈ ಭಾಗ ಒಳಪಟ್ಟಿರುವುದು ದೊರೆತಿರುವ ಶಾಸನಗಳ ಮೂಲಕ ತಿಳಿಯಬಹುದಾಗಿದೆ.

ಇವರ ನಂತರ ಬಹುಮನಿ ಸುಲ್ತಾನರು ಪಾಳೆಗಾರರು ಮಾಂಡಲಿಕರು ಗಾವುಂಡರು ಹೈಪಾಯರು ಮುಂದೆ ಹೈದ್ರಾಬಾದ ನಿಜಾಂರ ಕಾಲದ ಆಳ್ವಿಕೆಗೆ ಒಳಪಟ್ಟಿರುವುದು ಕಂಡುಬರುತ್ತದೆ. ಇದಕ್ಕೆ ಸಾಕ್ಷಾಧಾರಗಳೆಂಬಂತೆ ಶಾಸನಗಳು ದೊರೆತಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಭಾಗದ ಇತಿಹಾಸವು ಪ್ರಾಗೈತಿಹಾಸಿಕ ಕಾಲದ ಮಾನವನ ನೆಲೆಯಿಂದ ಹಿಡಿದು ರಾಜವಂಶಗಳ ಆಳ್ವಿಕೆಗೂ ಒಳಪಟ್ಟಿರುವುದು ಅಂದರೆ ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು ಯಾದವರು ವಿಜಯನಗರದ ಅರಸರು ಆಳ್ವಿಕೆ ನಡೆಸಿದರೆಂದೂ ಶಾಸನಗಳ ಮೂಲಕ ಸಾಕ್ಷಾಧಾರಗಳನ್ನು ಕಂಡುಕೊಳ್ಳಬಹುದಾಗಿದೆ.

## ಟಿಪ್ಪಣಿಗಳು

೧. 'ಮನಸಿರಿ' ಮಾನ್ವಿ ತಾಲೂಕು ನಾಲ್ಕು ಕನ್ನಡ ಸಾಹಿತ್ಯ ಸಮ್ಮೇಳನದ ವಿಶೇಷ ನೆನಪಿನ ಸಂಚಿಕೆ-೨೦೦೪ ಪುಟ-೨೯

೨. ಎಸ್.ಸಿ.ನಿಂಗಪ್ಪ ಎ.ಇ.ಇ.; ಸಹಾಯಕ ನಿರ್ವಹಕ ಅಭಿಯಂತರು ಮಾನ್ವಿ ಕಾಲುವೆ ಉಪ ವಿಭಾಗ ಸಂಖ್ಯೆ-೩ ಇವರು ಮಾಹಿತಿಯನ್ನು ಒದಗಿಸಿದರು.

೩. 'ಮನಸಿರಿ' ಮಾನ್ವಿ ತಾಲೂಕು ನಾಲ್ಕು ಕನ್ನಡ ಸಾಹಿತ್ಯ ಸಮ್ಮೇಳನದ ವಿಶೇಷ ನೆನಪಿನ ಸಂಚಿಕೆ-೨೦೦೪ ಪುಟ-೨೯

೪. ಅದೇ ಸಂಚಿಕೆ-೨೦೦೪ ಪು-೩೦

೫. ಅದೇ ಸಂಚಿಕೆ-೨೦೦೪ ಪು-೩೦

೬. ಅದೇ ಸಂಚಿಕೆ-೨೦೦೪ ಪು-೩೧

೭. ಅದೇ ಸಂಚಿಕೆ-೨೦೦೪ ಪು-೧೩೧

೯. ಅಮರೇಶ ಯಾತಗಲ್; ಇತಿಹಾಸ ಇಂಚರ-೨೦೦೭. ಪುಟ-೭೩

೧೦. ಸುಂದರ ಅ.; ಕರ್ನಾಟಕ ಚರಿತ್ರೆ ಸಂಪುಟ ೧. ೧೯೯೭. ಪುಟ-೨೦೬

೧೧. 'ಮನಸಿರಿ' ಮಾನ್ವಿ ತಾಲೂಕು ನಾಲ್ಕು ಕನ್ನಡ ಸಾಹಿತ್ಯ ಸಮ್ಮೇಳನದ ವಿಶೇಷ ನೆನಪಿನ ಸಂಚಿಕೆ–೨೦೦೪ ಪುಟ–೨೧

೧೨. ಸುರೇಂದ್ರ ರಾವ್.; ಕರ್ನಾಟಕ ಸಂಪುಟ–೨, ೧೯೯೭, ಪುಟ–೪

೧೩. ವೆಂಕಟಾಚಲ ಟಿ.ವಿ.; ನಮ್ಮ ಕರ್ನಾಟಕ ೧೯೮೩, ಪುಟ–೬೩

೧೪. ಸೂರ್ಯನಾಥ ಕಾಮತ; ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪುಟ–೬೫

೧೫. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೩೦೭

೧೬. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೩೪

೧೭. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೫೯

೧೮. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೫೭

೧೯. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೩೬

೨೦. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೩೭

೨೧. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೨೯೩

೨೨. ದೇವರಕೊಂಡಾರೆಡ್ಡಿ; ೨೦೦೯, ರಾಯಚೂರು ಜಿಲ್ಲಾ ಶಾಸನ ಸಂಪುಟ–೭, ಪುಟ ೩೨೬

೨೩. ನಾಗಯ್ಯ ಜೆ.ಎಂ.; ಆರನೆಯ ವಿಕ್ರಮಾದಿತ್ಯನ ಕಾಲದ ಶಾಸನಗಳು : ಒಂದು ಅಧ್ಯಯನ ೧೯೯೨, ಪುಟ–೩



**ಪೀಠಿಕೆ**

ಭಾರತೀಯರಿಗೆ ದೇವಸ್ಥಾನಗಳ ಬಗೆಗೆಗಿರುವ ನಂಭಿಕೆ, ಭಕ್ತಿ ವಿಶಿಷ್ಟವಾಗಿದೆ. ಪ್ರಾಚೀನಕಾಲದಲ್ಲಿ ಅವುಗಳ ಕಾರ್ಯಕ್ಷೇತ್ರವು ವ್ಯಾಪಕವಾಗಿದ್ದಿತು. ಅವು ಕರ್ನಾಟಕದ ಕಲೆಗಳ ಬಹು ಪ್ರಾಚೀನ ನಿದರ್ಶನಗಳಾಗಿವೆ. ಮುಂದೆ ವಿವಿಧ ಅರಸು ಮನೆತನಗಳು ಅಧಿಕಾರಕ್ಕೆ ಬಂದಾಗ ಅನೇಕ ದೇವಾಲಯಗಳು ನಿರ್ವಾಗೊಂಡಿವೆ. ರಾಜರು ತಮ್ಮ ವಿಜಯೋತ್ಸವದ ಹೆಗ್ಗುರುತಾಗಿ ದೇವಾಲಯಗಳನ್ನು ನಿರ್ಮಿಸಿದರು. ಇಲ್ಲಿರುವ ಅನೇಕ ಪುಣ್ಯ ಕ್ಷೇತ್ರಗಳು ಈ ಭಾಗವನ್ನು ಪಾವನಗೊಳಿಸಿವೆ. ದೇವಾಲಯಗಳು ಸಮಾಜದ ಅವಿಭಾಜ್ಯ ಅಂಗಗಳಾಗಿವೆ. ದೇವಾಲಯಗಳಿಂದಲೇ ಇಂದಿಗೂ ಕೆಲವು ಸ್ಥಳಗಳು ಪ್ರಸಿದ್ಧವಾಗಿವೆ. ದೇವಾಲಯಗಳು ಬದುಕಿನ ಹಲವು ಮುಖಗಳನ್ನು ಸಾಮುದಾಯಿಕವಾಗಿ ನಿಯಂತ್ರಿಸುತ್ತಿದ್ದು ಸಾಂಸ್ಕೃತಿಕ ಚಟುವಟಿಕೆಗಳ ನೆಲೆವೀಡಾಗಿದ್ದವು. ಜನತೆಯ ಉತ್ತಮ ನಡತೆಗೆ ಮಾರ್ಗದರ್ಶನ ನೀಡಿ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಬದುಕನ್ನು ಸಾರ್ಥಕಗೊಳಿಸುವ ಕಾರ್ಯವನ್ನು ಮಾಡುವುದರ ಮೂಲಕ ಜನತೆಯ ಕೇಂದ್ರಸ್ಥಾನಗಳಾಗಿದ್ದವು. ಜನಜೀವನವ ಭಾಗವಾಗಿದ್ದು ಅವರನ್ನು ತಿದ್ದುವ, ಬೆಳೆಸುವ ಶಕ್ತಿಗಳಾಗಿರಬೇಕೆಂಬುದು ದೇವಾಲಯಗಳ ಸ್ಥಾಪನೆಯ ಉದ್ದೇಶವಾಗಿತ್ತು.

ಸಮಾಜದಲ್ಲಿಯ ಎಲ್ಲ ವರ್ಗದ ಜನತೆಯೂ ದೇವಾಲಯಗಳೊಡನೆ ಸಂಬಂಧ ಇರಿಸಿಕೊಂಡಿದ್ದು ಶಾಸನಗಳಿಂದ ತಿಳಿದು ಬರುತ್ತದೆ. ದೇವಾಲಯಗಳನ್ನು ಸ್ಥಾಪಿಸುತ್ತಿದ್ದವರು ಅಂದಿನ ಅರಸರು. ರಾಣಿಯರು, ಮಾಂಡಳಿಕರು, ಅಮಾತ್ಯರು, ದಂಡನಾಯಕರು, ವಣೀಕರು ಅಷ್ಟೇ ಅಲ್ಲ ಸಾಮಾನ್ಯ ಜನರು ಕೂಡ ಎಲ್ಲರೂ ಒಂದೇ ರೀತಿಯ ಅಂತರಂಗದ ಬದುಕು ದೇವಾಲಯಗಳಿಗೆ ಸ್ಪಂದಿಸುವ ರೀತಿ, ದೇವಾಲಯಗಳು ಜನತೆಯ ಅಂತರಂಗವನ್ನು ವಿಕಸಿಸಿದ ರೀತಿಯನ್ನು ಆಯಾ ಕಾಲದ ಶಾಸನಗಳ ಮೂಲಕ ತಿಳಿಯಬಹುದಾಗಿದೆ. ಆಯಾ ಅರಸು ಮನೆತನಗಳ ಕಾಲದ ಧಾರ್ಮಿಕ

ಹಾಗೂ ಆರ್ಥಿಕ ಪರಿಸ್ಥಿತಿಯನ್ನು ಅನುಸರಿಸಿ ನಿರ್ಮಾಣವಾದ ದೇವಾಲಯಗಳು ಸಮಾಜಕ್ಕೆ ಸಲ್ಲಿಸಿದ ಕೊಡುಗೆ ಅಪಾರ. ಸಮಾಜದಲ್ಲಿ ಶಿಕ್ಷಣ ಸಂಸ್ಥೆಗಳಾಗಿ, ಸಾಮಾಜಿಕ ಮತ್ತು ಆರ್ಥಿಕ ವಿಕಾಸಕ ಹೊಣೆ ಹೊತ್ತಿದ್ದವು. ದೇವಾಲಯಗಳು ನ್ಯಾಯ ವಿತರಣಾ ಸಂಸ್ಥೆಗಳು ಆಗಿದ್ದವು. ಹೀಗೆ ಅಂದಿನ ದೇವಾಲಯಗಳು ಮತ್ತು ಅದರ ಕೇಂದ್ರ ವ್ಯಕ್ತಿಗಳು ಕರ್ನಾಟಕದ ಸಂಸ್ಕೃತಿಯನ್ನು ಪ್ರತಿನಿಧಿಸುವ ಮಹಾಶಕ್ತಿಗಳಾಗಿದ್ದವು.

ದೇವಾಲಯಗಳ ನಿರ್ಮಾಣ ಉದಾತ್ತವಾದ ಸಂಸ್ಕೃತಿಯ ಸಾಧನೆಗೆ ಹಿನ್ನೆಲೆ ಎಂಬ ಆಶಯದಿಂದಲೇ ಅಧಿಕ ಸಂಖ್ಯೆಯಲ್ಲಿ ದೇವಾಲಯಗಳು ನಿರ್ಮಾಣವಾದವು.

ಪ್ರಾಚೀನ ಕರ್ನಾಟಕದ ದೇವಾಲಯಗಳು ಜನರ ಭಕ್ತಿಯ ಪ್ರತೀಕಗಳಾಗಿದ್ದವು. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅವುಗಳ ಪ್ರಾಮುಖ್ಯತೆಯಿದ್ದುದು ಅಂದಿನ ಶಾಸನಗಳಿಂದ ತಿಳಿದು ಬರುತ್ತದೆ. ದೇವಸ್ಥಾನ ನಿರ್ಮಾಣ ವಿಷಯದಲ್ಲಿ ಹೆಚ್ಚು ಮಾನ್ಯತೆ ಮತ್ತು ಪ್ರೋತ್ಸಾಹಗಳು ಕಂಡುಬರುವುದು ಎಂಟು ಅಥವಾ ಒಂಬತ್ತನೆಯ ಶತಮಾನದಿಂದ ಬಳಿಕ, ಭಕ್ತಿ ಹಾಗೂ ನಿಷ್ಠೆಗಳನ್ನು ಒಗ್ಗೂಡಿಸಿಕೊಂಡಿದ್ದ ಹಲವಾರು ವ್ಯಕ್ತಿಗಳು ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲಿ ದೇವಸ್ಥಾನಗಳ ನಿರ್ಮಾಣಕ್ಕೆ ಕಾರಣೀಭೂತರಾಗಿದ್ದಾರೆ. ವ್ಯಕ್ತಿಗಳು ತಾವು ನಿಷ್ಠೆಯಿಂದ ಸಂಪಾದಿಸಿದ ಸಂಪತ್ತನ್ನು ಸಾರ್ಥಕಗೊಳಿಸಿಕೊಳ್ಳಬೇಕಾದರೆ ತಮ್ಮ ಇಷ್ಟ ದೈವದ ಹೆಸರಿನಲ್ಲಿ ದೇವಾಲಯ ನಿರ್ಮಾಣ ಮಾಡುವ ಉದ್ದೇಶ ಹೊಂದಿದ್ದರು. ತಮ್ಮ ಹೆಸರನ್ನು ಇಷ್ಟ ದೈವದ ಹೆಸರಿನೊಂದಿಗೆ ಸೇರಿಸಿ ದೇವಾಲಯ ನಿರ್ಮಾಣ ಮಾಡುತ್ತಿದರು.

ರಾಯಚೂರು ಜಿಲ್ಲೆಯಲ್ಲಿ ಬರುವ ತಾಲೂಕಗಳಲ್ಲಿ ಮಾನ್ವಿ ತಾಲೂಕು ಒಂದು. ಈ ತಾಲೂಕಿನ ಇತಿಹಾಸ ಮತ್ತು ಸಂಸ್ಕೃತಿ ಪ್ರಾಚೀನ ಸಂಸ್ಕೃತಿಗಳಲ್ಲಿ ಒಂದಾಗಿದೆ. ಎಂದೆಂದಿಗೂ ಅಳಿಸಲಾಗದಂತಹ ಮೌಲ್ಯಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಮಾನ್ವಿ ತಾಲೂಕಿನ ಕಲ್ಲೂರು, ವಟಗಲ್‌ಗಳಲ್ಲಿ ನವಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗದ ಆಯುಧಗಳು ದೊರೆತಿರುವುದು ಈಗಾಗಲೇ ದೃಢಪಟ್ಟಿದೆ. ಕವಿತಾಳ ಮತ್ತು ವಟಗಲ್‌ಗಳಲ್ಲಿ ಕಬ್ಬಿಣ ಯುಗದ ಅವಶೇಷಗಳು ಪತ್ತೆಯಾಗಿರುವುದು ತಿಳಿದು ಬರುತ್ತದೆ. ಇದು ಮಾನ್ವಿ ತಾಲೂಕಿನ ಐತಿಹಾಸಿಕ ಹಿನ್ನೆಲೆಯನ್ನು ಎತ್ತಿ ತೋರಿಸುತ್ತದೆ. ಕಲೆ, ಸಾಹಿತ್ಯ, ಸ್ಮಾರಕಗಳು ದೇವಾಲಯಗಳು, ಖನಿಜ, ಐಶ್ವರ್ಯ, ಧಾರ್ಮಿಕ, ಭಕ್ತಿ, ರಾಜಕೀಯ, ಸಾಮಾಜಿಕ, ಆರ್ಥಿಕ ಮುಂತಾದ ವಿಷಯಗಳಲ್ಲಿ ತುಂಬಾ ದಾಸ ಸಾಹಿತ್ಯದ ತೊಟ್ಟಿಲು ಎಂಬ ಕೀರ್ತಿ ಇದೆ ಎನ್ನುವುದು ಹೆಮ್ಮೆಯ ವಿಷಯವಾಗಿದೆ.

ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಹಾಗೂ ಇಲ್ಲಿ ದೊರೆತಿರುವ ಸಾಂಸ್ಕೃತಿಕ ಅವಶೇಷಗಳಿಂದ ಈ ತಾಲೂಕಿನ ಅಖಂಡವಾದ ಇತಿಹಾಸ ಮತ್ತು ಸಂಸ್ಕೃತಿಯ ಪರಿಚಯವಾಗುತ್ತದೆ.

ಧಾರ್ಮಿಕ ಕೇಂದ್ರ, ಹೆಜ್ಜೆಗೊಂದು ದೇವಾಲಯಗಳ ಸ್ಮಾರಕಗಳಿರುವಂತೆ ಮಾನ್ವಿ ತಾಲೂಕಿನಲ್ಲಿಯೂ ಅನೇಕ ದೇವಾಲಯಗಳು ಕಂಡು ಬರುತ್ತವೆ. ಅಲ್ಲದೆ ಶಿಲಾ ಶಾಸನಗಳು, ಶಿಲ್ಪಗಳು, ಗುಹೆಗಳು,

ಸ್ಮಾರಕಗಳು, ಬಸದಿಗಳು ಇತ್ಯಾದಿಗಳು ತಾಲೂಕಿನ ಭವ್ಯವಾದ ಇತಿಹಾಸ ಮತ್ತು ಸಾಂಸ್ಕೃತಿಕ ಮಹತ್ವವನ್ನು ಸಾರುತ್ತಾ ಇಂದಿಗೂ ನಿಂತಿವೆ. ನಮ್ಮ ಸಾಂಸ್ಕೃತಿಕ ಪ್ರತಿಬಿಂಬಿಸುವ ಕಲೆಗಳಾದ ತೊಗಲು ಗೊಂಬೆಯಾಟ, ಕೋಲಾಟ, ಡೋಳ್ಳುಕುಣಿತ, ಹಬ್ಬ–ಹರಿದಿನಗಳು, ಜನಪದ ನೃತ್ಯ ಈ ತಾಲೂಕಿನ ಹಲವು ಗ್ರಾಮಗಳಲ್ಲಿ ಇಂದಿಗೂ ಕಂಡುಬರುತ್ತವೆ.

ಆಯಾ ಕಾಲದಲ್ಲಿ ಆಡಳಿತ ನಡೆಸಿದ ಅರಸು ಮನೆತನಗಳು ಶಾಸನಗಳನ್ನು ಅಧ್ಯಯನ ಮಾಡುವುದರ ಮೂಲಕ ಅಲ್ಲಿರುವ ವಿಷಯವನ್ನು ನೇರವಾಗಿ ತಿಳಿಯಲು ಸಹಾಯವಾಗುತ್ತದೆ. ಆದ್ದರಿಂದಲೇ ಇತಿಹಾಸದ ಆಕರಗಳಲ್ಲಿ ಶಾಸನಗಳಿಗೆ ಹೆಚ್ಚಿನ ಮಹತ್ವವಿದೆ. ಗತ ವೈಭವದ ಇತಿಹಾಸದ ಮೂಲ ಸ್ವರೂಪವನ್ನು ತಿಳಿಯಲು ಶಾಸನಗಳು ಸಹಕಾರಿಯಾಗಿವೆ. ಭಾರತೀಯ ಭವ್ಯ ಪರಂಪರೆಯೇ ಇತಿಹಾಸದಲ್ಲಿ ಅಡಗಿರುವುದನ್ನು ಕಾಣುತ್ತೇವೆ. ಆದ್ದರಿಂದ ಇಲ್ಲಿ ಹೆಚ್ಚಿನ ಇತಿಹಾಸವನ್ನು ಶಾಸನಗಳಲ್ಲಿಯೇ ದೊರೆತ ಮಾಹಿತಿಯನ್ನಾಧರಿಸಿ ವಿವರಿಸಲು ಪ್ರಯತ್ನಿಸಲಾಗಿದೆ.

ಮಾನವಿ ತಾಲೂಕಿನ ವ್ಯಾಪ್ತಿಯೊಳಗೆ ಬರುವ ಮೂವತ್ತೇಳು ಗ್ರಾಮಗಳಲ್ಲಿ ಶಾಸನಗಳ ಸಂಖ್ಯೆ ನೂರಕ್ಕೂ ಹೆಚ್ಚಿನವು. ಈ ಶಾಸನಗಳ ಅಧ್ಯಯನದಿಂದ ನಮಗೆ ಒಟ್ಟು ಮಾನ್ವಿ ತಾಲೂಕಿನ ಇತಿಹಾಸ ಮತ್ತು ಸಂಸ್ಕೃತಿಯ ಚಿತ್ರಣ ಮೂಡಿಬರುತ್ತದೆ. ಒಂದು ನಾಡಿನ ಇತಿಹಾಸ ರಚನೆಗೆ ಶಾಸನಗಳು ಎಷ್ಟು ಮುಖ್ಯವೋ ಹಾಗೆಯೇ ದೇವಾಲಗಳು ನಮ್ಮ ಸಂಸ್ಕೃತಿಯ ತಳಹದಿಗೆ ಅವಿಭಾಜ್ಯ ಅಂಗವಾಗಿವೆ. ಇಲ್ಲಿನ ಬಹಪಾಲು ದೇವಾಲಯಗಳು ಕಲ್ಯಾಣಿ ಚಾಳುಕ್ಯರ ಆಳ್ವಿಕೆಯ ಕಾಲದಲ್ಲಿಯೇ ನಿರ್ಮಾಣಗೊಂಡಂಥವುಗಳು ಆಗಿವೆ. ಅವುಗಳ ಉಲ್ಲೇಖ ಮಾಡುವುದು ಇಲ್ಲಿ (ಶಾಸನಗಳ ಸಹಾಯದಿಂದ) ಉಚಿತವೆನಿಸುತ್ತದೆ.

ಚಾಲುಕ್ಯ ಭುವನೈಕಮಲ್ಲನ ಕಾಲದಲ್ಲಿ ಕಪ್ಪಗಲ್ಲಿನ ಭೋಗೇಶ್ವರ ಹರವಿಯ ಸ್ವಯಂಭೂ ದೇವಾಲಯ, ಚಾಲುಕ್ಯ ೬ನೇ ವಿಕ್ರಮಾದಿತ್ಯನ ಆಡಳಿತದ ಅವಧಿಯಲ್ಲಿ ಕಲ್ಲೂರಿನ ಸ್ವಯಂಭೂ ಮಾರಟೇಶ್ವರ, ಅಯ್ಯಣವಾಡಿಯ ರೆಬ್ಬಳೇಶ್ವರ ದೇವಾಲಯ ನಿರ್ಮಾಣಗೊಂಡಿವೆ. ಚಾಲುಕ್ಯ ೨ನೇ ಜಯಸಿಂಹನ ಅಧಿಕಾರದ ಅವಧಿಯಲ್ಲಿ ಬಲ್ಲಟಗಿಯ ತ್ರೈಪುರುಷ ದೇವಾಲಯ, ಚಂದೇಶ್ವರ ದೇವಾಲಯಗಳು ನಿರ್ಮಾಣಗೊಂಡಿವೆ. ೩ನೇ ಸೋಮೇಶ್ವರನ ಆಳ್ವಿಕೆಯ ಸಮಯದಲ್ಲಿ ಶಂಕರೇಶ್ವರ ಮತ್ತು ನಾಗಲೇಶ್ವರ ದೇವಾಲಯಗಳು ನಿರ್ಮಿಸಲ್ಪಟ್ಟಿದ್ದವು. ಚಾಳುಕ್ಯರ ಕಾಲದಲ್ಲಿ ರಾಜರು ಹೆಚ್ಚಾಗಿ ಶೈವ ಧರ್ಮದ ದೇವಾಲಯಗಳನ್ನು ನಿರ್ಮಾಣ ಮಾಡಿದ್ದು ಕಂಡುಬರುತ್ತದೆ.

ಚಾಳುಕ್ಯ ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಕುರುಡಿಯ ವಾಸುದೇವ ದೇವಾಲಯ ಮತ್ತು ಚಾಳುಕ್ಯ ಜಗದೇಕಮಲ್ಲನ ಆಳ್ವಿಕೆಯಲ್ಲಿ ಕೇಶವ ದೇವಾಲಯಗಳು ನಿರ್ಮಾಣಗೊಂಡಿವೆ. ಇವರ ಆಡಳಿತದ ಅವಧಿಯಲ್ಲಿ ವೈಷ್ಣವ ಧರ್ಮದ ದೇವಾಲಯಗಳು ನಿರ್ಮಣಗೊಂಡಿವೆ. ಚಾಳುಕ್ಯ ಭುವನೈಕಮಲ್ಲನ ದೇವಾಲಯವು ನಿರ್ಮಣಗೊಂಡಿದೆ.

ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಅನುಗುಣವಾಗಿ ಮಾನವಿ ತಾಲೂಕಿನಲ್ಲಿಯೂ ಹಲವು ಮತ ಧರ್ಮಗಳ ದೇವಾಲಯಗಳು ನಿರ್ಮಾಣಗೊಂಡಿದ್ದವು ಪರಧರ್ಮ ಸಹಿಷ್ಣುತೆಗೆ ಹೆಸರಾದ

ಹಲವು ಪ್ರಮುಖ ನಾಡಿನಲ್ಲಿ ಮಾನವಿ ತಾಲೂಕು ಒಂದಾಗಿತ್ತು ಎನ್ನುವುದಕ್ಕೆ ಇಲ್ಲಿ ನಿರ್ಮಾಗೊಂಡ ಶೈವ, ವೈಷ್ಣವ, ಜೈನ ಧರ್ಮ ದೇವಾಲಯಗಳೇ ಸಾಕ್ಷಿದಯಾಗಿವೆ. ಇದರಿಂದ ಇಲ್ಲಿಯ ಅರಸರು ಪರಮತ ಧರ್ಮವನ್ನು ಪೋಷಿಸಿಕೊಂಡು ಬಂದಿರುವುದಷ್ಟೇ ಅಲ್ಲದೆ ಆ ಧರ್ಮಗಳಿಗೆ ಆಶ್ರಯವನ್ನು ಒದಗಿಸಿದ್ದರು. ಎಲ್ಲಾ ಧರ್ಮಗಳೀಗೆ ಆಶ್ರಯವನ್ನಿತ್ತು ಧಾರ್ಮಿಕ ಸಮನ್ವಯತೆಯನ್ನು ಕಾಪಾಡಿಕೊಂಡರೆಂಬುಂದು ಅವರ ವಿಶಾಲ ಮನೋಧರ್ಮವನ್ನು ತೋರಿಸುತ್ತದೆ.

ಪರಧರ್ಮ ಸಹಿಷ್ಣುತೆಗೆ ಹೆಸರಾದ ಪ್ರಮುಖ ನಾಡಿನಲ್ಲಿ ಮಾನವಿ ತಾಲೂಕು ಒಂದು. ವಿವಿಧ ಅರಸು ಮನೆತನಗಳ ಆಳ್ವಿಕೆಗೆ ಅನುಗುಣವಾಗಿ ದೇವಾಲಯಗಳು ರಚನೆಯ ಉತ್ತಮ ಪರಂಪರೆಯೇ ನಿರ್ಮಿತವಾಗಿವೆ. ಪರಧರ್ಮ ಸಹಿಷ್ಣುತೆಯ ಬೀಡಾಗಿದ್ದ ನಮ್ಮ ನಾಡು ಅನೇಕ ಧರ್ಮಗಳನ್ನಾಧರಿಸಿ ಕಟ್ಟಿಸಿದ್ದ ದೇವಾಲಯಗಳು ಹೆಸರಾಗಿದೆ. ದೇವಾಲಯಗಳನ್ನು ರಾಜರು, ಮಾಂಡಳೀಕರು, ದಂಡನಾಯಕರು, ಸಾಮಂತರು, ಸಾಮಾನ್ಯ ಜನರು ತಮ್ಮ ಆದಿದೇವ ಹಾಗೂ ಬೇರೊಂದು ಸ್ಮರಣಾರ್ಥದ ಹೆಸರುಗಳ ಹಿನ್ನೆಲೆಯಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿದ್ದಾರೆ.

ಬಾದಾಮಿ ಚಾಲುಕ್ಯ ಮತ್ತು ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಕೆಲವರು ನಮ್ಮ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿದರೆ ಇನ್ನೂ ಕೆಲವು ಅರಸರು, ರಾಣಿಯರು, ದಂಡನಾಯಕರು, ಸಾಮಂತರು ನಿರ್ಮಿಸಿದ ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಟ್ಟಿದ್ದಾರೆ.

ಅರಸರು ತಾವು ದೇವಾಲಯಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡುವುದರ ಜೊತೆಗೆ ಸ್ವತಃ ತಾವೇ ದೇವಾಲಯಗಳನ್ನು ನಿರ್ಮಿಸಿ ಇತರರಿಗೆ ಮಾರ್ಗದರ್ಶಕರಾಗಿದ್ದರು. ದೇವಾಲಯದ ನಿರ್ಮಾಣದೊಂದಿಗೆ ಅವುಗಳ ಉನ್ನತಿಗಾಗಿ ದಾನ-ದತ್ತಿ ನೀಡಿ ಪೋಷಿಸಿಕೊಂಡು ಬಂದಿದ್ದಾರೆ. ಕಲ್ಯಾಣಿ ಚಾಳುಕ್ಯ ಅರಸ ಎರಡನೆಯ ಜಯಸಿಂಹನು ಎಡದೊರೆ ೨೦೦ದ ಕಂಪಣ, ಮೊಸಳಿಕಲ್ಲೂ-೩೦೦ರ ಭತ್ತ ಗ್ರಾಮವನ್ನು ಬಲ್ಲಟಗಿಯ ಚಂದ್ರೇಶ್ವರ ದೇವಾಲಯಕ್ಕೆ ದಾನ ಬಿಟ್ಟು ಉಲ್ಲೇಖ ಬಲ್ಲಟಗಿ (ಕ್ರಿ.ಶ.೧೦೩೬) ಶಾಸನದಿಮದ ತಿಳಿದು ಬರುತ್ತದೆ.

ರಾಣಿಯರು ರಾಜನನ್ನು ಮೆಚ್ಚಿಸುವ ಸಲುವಾಗಿ ಅವರ ಕೀರ್ತಿಯನ್ನು ಶಾಶ್ವತಗೊಳಿಸಲಿಕ್ಕೆ ಅವರ ಸ್ಮರಣಾರ್ಥ ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಟ್ಟ ಶಾಸನಗಳು ಇಲ್ಲಿ ದೊರೆತಿವೆ. ಬಳ್ಳನಿಟ್ಟಿಗೆ ತ್ರೈಪುರುದ ದೇವಾಲಯಕ್ಕೆ ಭೂಮಿಯನ್ನು ದಾನ ಬಿಟ್ಟಿರುವುದು ಕ್ರಿ.ಶ.೧೧ನೇ ಶತಮಾನದ ಶಾಸನಗಳಿಂದ ಸೋಮೇಶ್ವರದ ರಾಣಿಯು ರಾಚಾಮೇಶ್ವರ ದೇವಾಲಯಕ್ಕೆ ದೇವರ ಅರ್ಚನೆ, ನೃತ್ಯ, ಸಂಗೀತ ಇವುಗಳ ಜೀರ್ನೋದ್ಧಾರಕ್ಕೆ ದಾನ ಕೊಟ್ಟ ಉಲ್ಲೇಖ ಕಂಡುಬರುತ್ತದೆ. ಚಾಲುಕ್ಯ ಭುವನೈಕಮಲ್ಲನ ಪತ್ನಿಯು ಸ್ವಯಂಭೂ ದೇವಾಲಯಕ್ಕೆ ೫೦ ಮತ್ತು ಕರಿಯ ನೆಲವನ್ನು ೨೦೦ ಕಮ್ಮಗಟ್ಟ. ೧ ಗಾಣ. ಮನೆಯನ್ನು ಹಾಗು ಇದರೊಂದಿಗೆ ದೇವಾಲಯದ ಸೇವೆಗಾಗಿ ಅಲ್ಲಿರುವ ತಪೋಧನರ ಆಹಾರ ದಾನ, ವಾದ್ಯ ಅದರ ಜೀರ್ಣೋದ್ಧಾರಕ್ಕಾಗಿ ಬಿಟ್ಟ ದಾನದ ಬಗ್ಗೆ (ಕ್ರಿ.ಶ.೧೦೪೯) ಹರಪ ಶಾಸನ ತಿಳಿಸುತ್ತದೆ. ವಿಶಾಲ ಸಾಮ್ರಾಜ್ಯದ ದೊರೆಯ ಪತ್ನಿಯರು ಬೇರೆ ಬೇರೆ ಭಾಗಗಳಲ್ಲಿ ಆಡಳಿತವನ್ನು

ನೋಡಿಕೊಳ್ಳುತ್ತಿದ್ದ ಕಾರಣ ಪ್ರಜೆಗಳೊಂದಿಗೆ ಬೆರೆತು ಬಾಳಬೇಕಾಗಿತ್ತು. ಈ ದೃಷ್ಟಿಯಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯವನ್ನು ಕೈಗೊಳ್ಳುತ್ತಿದ್ದರು. ದೇವಾಲಯ ನಿರ್ಮಾಣದಲ್ಲಿ ದಾನ-ದತ್ತಿ ನೀಡುವಲ್ಲಿ ಸ್ವಪ್ರೇರಣೆ, ಧರ್ಮದ ಭದ್ರ ತಳಹದಿಗೆ ತಮ್ಮದೊಂದು ಕಾಣಿಕೆ ಸಲ್ಲಬೇಕೆಂಬ ಆಶಯ, ದೊರೆಯ ಕೀರ್ತಿಯನ್ನು ಶಾಶ್ವತಗೊಳಿಸಬೇಕೆಂಬ ಉದ್ದೇಶ ಅಡಗಿರುವುದನ್ನು ಗುರುತಿಸಬಹುದಾಗಿದೆ.

ದಂಡನಾಯಕ ನಿಂಬಣ್ಣಯ್ಯನ ಕುರುಡಿಯಲ್ಲಿ ನಂಬಣೇಶ್ವರ ದೇವಾಲಯವನ್ನು ಮಾಡಿಸಿದ್ದ ಚಾಲುಕ್ಯ ೬ನೇ ವಿಕ್ರಮಾದಿತ್ಯನ ಕಾಲದ ಶಾಸನ ತಿಳಿಸುತ್ತದೆ. ಚಾಲುಕ್ಯ ಅರಸನು ಮನೆತನದ ಈ ದಂಡನಾಯಕನು ತನ್ನ ಹೆಸರಿನೊಂದಿಗೆ ಈಶ್ವರ ಹೆಸರು ಸೇರಿಸಿ ದೇವಾಲಯ ಸ್ಥಾಪಿಸಿರುವುದು ಕಂಡು ಬರುತ್ತದೆ. ಈ ರೀತಿಯ ಕೆಲವು ದೇವಾಲಯಗಳಲ್ಲಿ ಮೂಲತಃ ಇದ್ದ ಹೆಸರನ್ನು ಹೋಲುವ ಮತ್ತೊಂದು ಹೆಸರನ್ನು ಹೊಂದಿರುವುದು ಕಂಡು ಬರುತ್ತದೆ. ಕುರುಡಿಯ ಕ್ರಿ.ಶ.೧೨ನೇ ಶತಮಾನದ ಶಾಸನವು ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಸಮಯದಲ್ಲಿ ರೆಬ್ಬಲದೇವಿ ಎಂಬ ಮಹಿಳೆಯ ರೆಬ್ಬಳೇಶ್ವರ ದೇವಾಲಯವನ್ನು ನಿರ್ಮಿಸಿದ್ದನ್ನು ಹೇಳುತ್ತದೆ. ಶಂಕರಾರ್ಯನ ಹೆಂಡತಿಯಾದ ನಾಗಲದೇವಿಗೆ ನಿಂಬಣಯ್ಯ ಎಂಬ ವ್ಯಕ್ತಿಯು ಅಗ್ರಹಾರ ರಾರಾವಿಯಲ್ಲಿ ಭೂಮಿಯನ್ನು ಬಳುವಳಿಯಾಗಿ ನೀಡಿರುತ್ತಾನೆ. ಅದರಲ್ಲಿ ಅರ್ಧ ವೃತ್ತಿಯನ್ನು ನಾಗಲದೇವಿಯ ಕುರುಡಿಯ ಶಂಕರೇಶ್ವರ ಮತ್ತು ನಾಲಗೇಶ್ವರ ದೇವಾಲಯಕ್ಕೆ ದಾನ ಬಿಟ್ಟಿದ್ದನ್ನು ೩ನೇ ಸೋಮೇಶ್ವರ ಕಾಲದ ೧೧ನೇ ಶತಮಾನದ ಕುರುಡಿ ಶಾಸನ ಹೇಳುತ್ತದೆ. ದೇವಾಲಯ ಕಟ್ಟಿಸಿದ್ದು ಯಾರು ಎಂಬ ವಿಷಯ ತಿಳಿದು ಬರದಿದ್ದರು ಶಂಕರಾರ್ಯ ಮತ್ತು ನಾಗಲದೇವಿ ಎಂಬ ಹೆಸರನ್ನೊಳಗೊಂಡ ಶಂಕರೇಶ್ವರ ಮತ್ತು ನಾಗಲೇಶ್ವರ ದೇವಾಲಯಳಿದ್ದುದು ತಿಳಿದು ಬರುತ್ತದೆ. ೧೩ನೇ ಶತಮಾನದ ನುಗದೋಣಿಯ ಶಾಸನವು ನಖರೇಶ್ವರ ದೇವಾಲಯಕ್ಕೆ ೧೨ ಮತ್ತರು ಭೂಮಿಯನ್ನು ಬಿಟ್ಟ ವಿವರವನ್ನು ದಾಖಲಿಸಿದೆ. ಈ ರೀತಿಯ ಕಲವು ದೇವಾಲಯಗಳಲ್ಲಿ ಮೂಲತಃ ಇದ್ದ ಹೆಸರನ್ನು ಹೋಲುವ ಮತ್ತೊಂದು ಹೆಸರನ್ನು ಹೊಂದಿರುವುದು ಕಂಡು ಬರುತ್ತದೆ. ಯಾವ ವ್ಯಕ್ತಿ ದೇವರು ಮತ್ತು ದೇವಾಲಯಗಳನ್ನು ಸ್ಥಾಪಿಸುತ್ತಾರೋ ಅವರ ಹೆಸರಿನಿಂದ ಆ ದೇವಾಲಯವನ್ನು ಮತ್ತು ದೇವರನ್ನು ಕರೆಯಲಾಗುತ್ತಿತ್ತು. ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರ ಹೆಸರಿನೊಂದಿಗೆ ಬಂದು ಕಟ್ಟಿಸಿದವನು ದೇವರೇ ಆಗಿಬಿಡುತ್ತಾರೆಂಬುದು ಇಲ್ಲಿದೆ. ಆದ್ದರಿಂದ ಒಬ್ಬ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನು ಸೇರಿಸಿ ಆ ಹೆಸರುಳ್ಳ ದೇವರನ್ನು ನಿರ್ಮಿಸುವ ವಿಷಯವು ಹಲವು ಶಾಸನಗಳಲ್ಲಿದೆ. ತಮ್ಮ ಹೆಸರಿನೊಂದಿಗೆ ದೇವಸ್ಥಾನ ನಿರ್ಮಾಣ ಮಾಡುವ ವಿಷಯದಲ್ಲಿ ಹೆಚ್ಚು ಉತ್ಸಾಹ ಇರುವುದು ಇಲ್ಲಿ ಗೋಚರವಾಗುತ್ತದೆ.

ದಂಡನಾಯಕರು ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಟ್ಟ ಶಾಸನಗಳಲ್ಲಿ ಉಲ್ಲೇಖ ಸಿಗುತ್ತದೆ. ೬ನೇ ವಿಕ್ರಮಾದಿತ್ಯನ ದಂಡನಾಯಕ ನಿಂಬಣಯ್ಯನ ನಿಂಬಣೇಶ್ವರ ದೇವಾಲಯಕ್ಕೆ ಈ ಮೊದಲು ತಾನು ಚಂದ್ರಶೇಖರ ಭಟ್ಟರಿಗೆ ದಾನ ಬಿಟ್ಟಿದ್ದ ಭೂಮಿಯನ್ನು ಮತ್ತೊಮ್ಮೆ ಕ್ರಯಕ್ಕೆ ಪಡೆದು ದತ್ತಿ ಬಿಟ್ಟಿದ್ದು ಕ್ರಿ.ಶ.೧೧೨೬ನೇ ಕುರುಡಿ ಶಾಸನ ಹೇಳುತ್ತದೆ. ರವಿಯಣ ಭಟ್ಟ ದಂಡನಾಯಕನು ರೆಬ್ಬಲೇಶ್ವರ

ದೇವಾಲಯಕ್ಕೆ ದತ್ತಿ ಬಿಟ್ಟ ವಿಷಯವು ಕ್ರಿ.ಶ.೧೨ನೇ ಶತಮಾನದ ಕುರುಡಿ ಶಾಸನ ತಿಳಿಸುತ್ತದೆ. ದಂಡನಾಯಕ ಪಟ್ಟ ಸಾಹಣಿ ಭೀಮಣ್ಣಯ್ಯ ಮತ್ತ ಮಹಾಮಂಡಳೇಶ್ವರ ಭೂರಿದೇವರಸರು ಸೇರಿ ಕೇಶವದೇವರ ಅಂಗಭೋಗ, ನೈವೇದ್ಯ, ನಂದಾದೀಪ, ಚೈತ್ರ ಪವಿತ್ರಕ್ಕೆಂದು ದಕ್ಷಿಣದ ತಮ್ಮ ಭಾಗವನ್ನು ದಾನ ನೀಡಿದಂತೆ ಕಲ್ಲೂರಿನ (ಕ್ರಿ.ಶ.೧೧೪೩) ಶಾಸನ ಹೇಳಿದೆ. ಮಹಾಮಂಡಳೇಶ್ವರನ ಸಾಮಂತನಾದ ಮಳೆಯಮರಸನು ಗಿರಿಕೋಟೆಮಲ್ಲ ಎಂಬ ಹೆಸರಿನ ಜನಾಲಯಕ್ಕೆ ಗಾಣ ನಿವೇಶನಗಳನ್ನು ದಾನ ನೀಡಿದ್ದನ್ನು ದದ್ದಲ (ಕ್ರಿ.ಶ.೧೦೬೯) ಶಾಸನ ತಿಳಿಸುತ್ತದೆ.

ಅರಸರು, ರಾಣಿಯರು, ದಂಡನಾಯಕರು, ಸಾಮಂತರು, ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಡುತ್ತಿದ್ದರಷ್ಟೇ ಅಲ್ಲದೇ ಸಾಮಾನ್ಯ ಜನರು, ವ್ಯಾಪಾರಿಗಳು, ಮಹಿಳೆಯರು ದತ್ತಿಯನ್ನು ಬಿಟ್ಟ ವಿವರವನ್ನು ಶಾಸನಗಳು ತಿಳಿಸುತ್ತದೆ. ಕ್ರಿ.ಶ.೧೨ನೇ ಶತಮಾನದಲ್ಲಿ ರೆಬ್ಬಲದೇವಿ ಎಂಬ ಮಹಿಳೇಯು ರೆಬ್ಬಳೇಶ್ವರ ದೇವಾಲಯಕ್ಕೆ ದಾನ ಬಿಟ್ಟ ಉಲ್ಲೇಖ ಕುರುಡಿ ಶಾಸನದಲ್ಲಿದೆ. ನಾಗಲೇಶ್ವರ ಮತ್ತು ಶಂಕರೇಶ್ವರ ದೇವಾಲಯಕ್ಕೆ ನಾಗಲದೇವಿ ಎಂಬ ಮತ್ತೊಬ್ಬ ಮಹಿಳೆಯ ದಾನ ಬಿಟ್ಟಿದ್ದು ಕ್ರಿ.ಶ.೧೧೩೮ರ ಕುರುಡಿ ಶಾಸನ ಪ್ರಸ್ತಾಪಿಸುತ್ತದೆ. ಹಾಗೂ ಕ್ರಿ.ಶ.೧೧೪೩ರ ಕಲ್ಲೂರು ಶಾಸನವು 'ಸಾತಿಕವ್ವೆ' ಎಂಬುವಳು ಕೇಶವ ದೇವಾಲ ದಾನ ಕೊಟ್ಟ ಬಗ್ಗೆ ತಿಳಿಸುತ್ತದೆ. ವ್ಯಾಪಾರಿಗಳು ತಾವು ಮಾರುವ ಮೆಣಸು, ಸುಂಠಿ, ಹಿಪ್ಪಲ, ಸಕ್ಕರೆ, ಅರಿಸಿನ, ಅಲ್ಲ, ಸಾಸುವೆ, ಜೀರಿಗೆ ಮುಂತಾದವುಗಳಿಂದ ಬರುವ ಲಾಭಾಂಶವನ್ನು ದಾನವಾಗಿ ಬಿಟ್ಟ ಉಲ್ಲೇಖ ತುಪ್ಪದೂರಿನ ೧೨ನೇ ಶತಮಾನದ ಶಾಸನ ತಿಳಿಸುತ್ತದೆ.

ಮಾನವಿ ತಾಲೂಕಿನ ಪ್ರಮುಖ ದೇವಾಲಯಗಳಿಗಿರುವ ಕುರುಡಿ ಮತ್ತು ಬಲ್ಲಟಗಿ ಗ್ರಾಮಗಳು ಅಗ್ರಹಾರಗಳಾಗಿದ್ದವು. ಈ ಅಗ್ರಹಾರಗಳು ಪ್ರಾಚೀನ ಕಾಲದಲ್ಲಿ ವಿದ್ಯಾಕೇಂದ್ರಗಳಾಗಿದ್ದವು. ಬ್ರಾಹ್ಮಣರ ನಿವಾಸಕ್ಕಾಗಿಯೇ ಕೆಲವು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾರ್ಪಡಿಸಿ ದಾನವಾಗಿ ಬಿಟ್ಟುಕೊಡುವ ಸಂಪ್ರದಾಯ ಹಿಂದಿನ ಕಾಲದಲ್ಲಿತ್ತೆಂದು ಶಾಸನಗಳ ಮೂಲಕ ತಿಳಿದುಬರುತ್ತದೆ. ಪ್ರಾಚೀನ ಕಾಲದಲ್ಲಿ ದೇವಾಲಯಗಳು ವಿದ್ಯಾ ಚಟುವಟಿಕೆಗಳಿಗೆ ಆಶ್ರಯ ಕಲ್ಪಿಸಿದ್ದವು. ಭಕ್ತರು ದೇವಸ್ಥಾನಗಳ ಪೂಜಾದಿಗಳಿಗೆ ದತ್ತಿಯನ್ನು ಬಿಟ್ಟು ಕೊಡುವಾಗ ವಿದ್ಯಾಭ್ಯಾಸಕ್ಕಾಗಿಯೂ ದತ್ತಿಯನ್ನು ಬಿಡುವ ಸಂಪ್ರದಾಯವಿರಿಸಿಕೊಂಡಿದ್ದರು. ಹೀಗೆ ದೇವಸ್ಥಾನಗಳು ಜ್ಞಾನ ಮತ್ತು ವಿದ್ಯಾ ಪ್ರಸಾರದ ಕೇಂದ್ರಗಳಾಗಿದ್ದವು. ಒಟ್ಟಿನಲ್ಲಿ ಅರಸು ಮನೆತನ ಹಾಗೂ ಅಧಿಕಾರಿಗಳು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ ಅವುಗಳಿಗೆ ಅನೇಕ ದಾನ ದತ್ತಿಗಳನ್ನು ನೀಡುತ್ತಿದ್ದರು.

ಕರ್ನಾಟಕದ ವಾಸ್ತು ಶಿಲ್ಪ ಶೈಲಿಯಲ್ಲಿ ಅನೇಕ ಬಗೆಯ ಪ್ರಯೋಗಗಳನ್ನು ನಡೆಸಿದ ಅವಧಿ ಎಂದರೆ ಚಾಲುಕ್ಯ ಮತ್ತು ರಾಷ್ಟ್ರಕೂಟರ ಮನೆತನದ ಆಳ್ವಿಕೆಯ ಕಾಲ, ಈ ಎರಡು ಅರಸು ಮನೆತನಗಳ ಅವಧಿಯಲ್ಲಿ ಮಾನವಿ ತಾಲೂಕಿನಲ್ಲಿಯೂ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಇಲ್ಲಿಯ ದೇವಾಲಯಗಳು ಕಲೆಯ ದೃಷ್ಟಿಯಲ್ಲಿ ಅತ್ಯಂತ ದೇವಾಲಯಗಳ ವಾಸ್ತು ಅತ್ಯಂತ ವೈವಿಧ್ಯಮಯವೂ ಅಪೂರ್ವ ವಿನ್ಯಾಸಯುತವೂ ಆಗಿವೆ. ಅಲ್ಲದೆ ಅಲಂಕೃತದ ದೃಷ್ಟಿಯಿಂದ ಎಲ್ಲರ ಗಮನ ಸೆಳೆಯುತ್ತವೆ.

ಇಲ್ಲಿಯ ದೇವಾಲಯಗಳಲ್ಲಿ ಬಲ್ಲಟಗಿಯ ಜಾಮೇಶ್ವರ ದೇವಾಲಯ, ತ್ರೈಪುರುಷ ದೇವಾಲಯ, ಕುರುಡಿಯ ಪಲ್ಲವೇಶ್ವರ, ಕಲ್ಲೂರಿನ ಮಾರಟೇಶ್ವರ, ಕೇಶವ ದೇವಾಲಯ, ದದ್ದಲದ ಗಿರಿಕೋಟೆಮಲ್ಲ ಜೈನಾಲಯಗಳು ಐತಿಹಾಸಿಕ ದೃಷ್ಟಿಯಿಂದ ಪ್ರಮುಖವಾಗಿದೆ.

ದೇಗುಲದ ಕಲ್ಪನೆಯ ಮುಂದೆ ಕಲೆಯ ಪ್ರತಿರೂಪವಾಗಿ ಮೂಡಿ ವಾಸ್ತು ಶಿಲ್ಪ ಶೈಲಿಯಲ್ಲಿ ಅನೇಕ ವೈವಿಧ್ಯಮಯ ದೇವಾಲಯಗಳು ನಿರ್ಮಾಣಗೊಂಡವು. ಅರಸು ಮನೆತನಗಳು ದೇಗುಲಗಳ ನಿರ್ಮಾಣಕ್ಕೆ ವಿಶೇಷ ಪ್ರೋತ್ಸಾಹ ನೀಡಿ ಕಲೆಯನ್ನು ಪೋಷಿಸಿದ್ದಾರೆ. ಅಲ್ಲದೆ ದೇವಾಲಯಗಳು ಶಾಶ್ವತವಾಗಿ ಉಳಿಯಬೇಕೆನ್ನುವುದು ಮಹತ್ವದ ಅಂಶವಾಗಿ ಬೆಳೆಯಿತು.

ದೇವಾಲಯಗಳು ಪ್ರಾಚೀನ ಕಾಲದಲ್ಲಿ ಕೇವಲ ಧಾರ್ಮಿಕವಾಗಿ ತನ್ನ ಅಸ್ತಿತ್ವವನ್ನು ಹೊಂದಿರದೆ; ವಿದ್ಯಾಕೇಂದ್ರಗಳಾಗಿ, ಆಶ್ರಯಧಾಮಗಳಾಗಿ ಕಲೆಗೆ ಪ್ರೋತ್ಸಾಹ ನೀಡುವುದರೊಂದಿಗೆ ಸಾಮಾಜಿಕ ಚಟುವಟಿಕೆಗಳಿಗೆ ಕಾರ್ಯ ನಿರ್ವಹಿಸಿ ತನ್ನದೇ ಆದ ಬಹುಮುಖ್ಯ ಕಾಣಿಕೆ ಸಲ್ಲಿಸಿವೆ. ದೇವಾಲಯಗಳಿಗೆ ದಾನ–ದತ್ತಿಗಳನ್ನು ಬಿಡುವಾಗ ಶಿಕ್ಷಣಕ್ಕೆಂದು ಇಂತಿಷ್ಟು ಭಾಗವನ್ನು ಮೀಸಲಾಗಿರಿಸುತ್ತಿದ್ದರು. ಸಂಗೀತ ಮತ್ತು ನೃತ್ಯಕಲೆಗಳನ್ನು ದೇವಾಲಯಗಳು ವಿಶೇಷವಾಗಿ ಪ್ರೋತ್ಸಾಹಿಸಿದವು. ಶಾಸನ ಮತ್ತು ಸಾಹಿತ್ಯ ಕೃತಿಗಳ ಮೂಲಕ ದೇವಾಲಯಗಳಲ್ಲಿ ಸಂಗೀತ ಮತ್ತು ನೃತ್ಯ ಕಲೆಗಳು ಪಡೆದಿದ್ದ ಸ್ಥಾನ–ಮಾನಗನ್ನು ಗುರುತಿಸಬಹುದು. ಅಂತರಂಗಿಕ ಅನುಭವದ ಅಧ್ಯಾತ್ಮಿಕ ಸಾಧನೆಗಳು, ಧಾರ್ಮಿಕ ಆಚರಣೆಗಳು, ಹಬ್ಬ ಹರಿದಿನಗಳು, ಸಾಹಿತ್ಯ ಕಲೆಗಳು ಈ ಎಲ್ಲಾ ಅಂಶಗಳೂ ವಿಪುಲವೂ, ವೈವಿಧ್ಯ ಪೂರ್ಣವೂ, ವಿಸ್ತಾರವೂ, ವ್ಯಾಪಕವು ಪೂರ್ಣ ದೃಷ್ಟಿ ಸಮನ್ವಿತವೂ ಆಗಿ ಬೆಳೆಯಲು ದೇವಾಲಯಗಳ ಕೊಡುಗೆಯು ಅಪಾರವಾಗಿದೆ. ಅಂದಿನ ದೇವಾಲಯಗಳು ಅನ್ನ ಸತ್ರಾದಿಯನ್ನು ದಾನ ಮಾಡುವುದುರ ಮೂಲಕ ಲೋಕೋಪಯೋಗಿ ಕಾರ್ಯವನ್ನು ಮಾಡುತ್ತಿದ್ದಿತು. ಹೀಗೆ ದೇವಾಲಯಗಳನ್ನು ಕಟ್ಟಿಸಿವುದು, ಅವುಗಳ ವ್ಯವಸ್ಥೆಗಾಗಿ, ಸಾರ್ವಜನಿಕ ಹಿತಾಸಕ್ತಿಗಳ ಕಾರ್ಯಗಳಿಗಾಗಿ, ವಿದ್ಯಾಭ್ಯಾಸಕ್ಕಾಗಿ ದಾನ–ದತ್ತಿಗಳನ್ನು ಕೊಡುವುದು ಲೌಕಿಕ ಸಂಪತ್ತಿನ ಗಳಿಕೆ ಸಾರ್ಥಕತೆ ಎಂದು ಜನ ಭಾವಿಸಿದ್ದರು. ರಾಜರಿಂದ ಹಿಡಿದು ಜನಸಾಮಾನ್ಯರವರೆಗೂ ಈ ಧಾರ್ಮಿಕ ಭಾವನೆ ಜೀವನದ ಸಹಜಗುಣವಾಗಿ ಪರಿಣಮಿಸಿತ್ತು. ಒಟ್ಟಿನಲ್ಲಿ ಅಂದಿನ ದೇವಾಲಯಗಳು ಮತ್ತು ಅದರ ಕೇಂದ್ರ ವ್ಯಕ್ತಿಗಳೂ ಕರ್ನಾಟಕದ ಸಂಸ್ಕೃತಿಯನ್ನು ಪ್ರತಿನಿಧಿಸುವ ಮಹಾಶಕ್ತಿಗಳಾಗಿದ್ದರು. ಕನ್ನಡ ನಾಡಿನ ಶಿಲ್ಪಕಲಾ ಪ್ರಪಂಚದ ಬಹುದೊಡ್ಡ ಆಸ್ತಿಗಳು ಈ ದೇವಾಲಯಗಳು.

ಮೇಲೆ ವಿವರಿಸಲಾದಂತಹ ಬಹು ಮುಖ ಚಟುವಟಿಕೆಗಳನ್ನು ಮಾನವಿ ತಾಲೂಕಿನ ದೇವಾಲಯಗಳು ಹೊಂದಿದ್ದವು ಎಂಬುದನ್ನು ಶಾಸನಗಳು ಹಾಗೂ ಈಗಲೂ ಉಳಿದಿರುವ ಈ ದೇವಾಲಯಗಳ ಮೂಲಕ ತಿಳಿಬಹುದಾಗಿದೆ. ಒಟ್ಟಾರೆಯಾಗಿ ಮಾನವಿ ತಾಲೂಕಿನ ಸಾಂಸ್ಕೃತಿಕ ಹಿರಿಮೆಯನ್ನು ಸಾರುವಲ್ಲಿ ಅಲ್ಲಿರುವ ದೇವಾಲಯಗಳು ಮಹತ್ವದ ಪಾತ್ರ ವಹಿಸಿವೆ.

## ೩.೧. ದೇವಾಲಯಗಳು ವಾಸ್ತುಕಲೆ

ಆರ್ಥಿಕ ಸಂಪತ್ತು ಮಾತ್ರ ದೇಶದ ಸಂಪತ್ತಾಗಿರಲಾರದು. ಅದರ ಜೊತೆಗೆ ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ದೇವಾಲಯಗಳು ಈ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಪ್ರಮುಖ

ಪಾತ್ರ ವಹಿಸುತ್ತವೆ. ಇದರ ಜೊತೆ ಜೊತೆಗೆ ಭಾರತ ಎನ್ನುವ ವಿಶಾಲ ಸಮುದಾಯ ಕಲೆ, ಸಾಹಿತ್ಯ, ಧರ್ಮ, ವಾಸ್ತು ಶಿಲ್ಪಗಳು ಇನ್ನು ಮುಂತಾದವುಗಳನ್ನು ಒಳಗೊಂಡಿದ್ದು ತನ್ನ ವಿಶಿಷ್ಟ ಸಂಸ್ಕೃತಿಯಿಂದ ಇನ್ನಿತರ ದೇಶಗಳಿಗೂ ಮಾದರಿಯಾಗಿ ನಿಲ್ಲುತ್ತದೆ.

ದೇವಾಲಯಗಳು ಈ ಸಮಾಜದ ಅವಿಭಾಜ್ಯ ಅಂಗವಾಗಿ ವಿವಿಧ ಅರಸು ಮನೆತನಗಳು ಅಧಿಕಾರಕ್ಕೆ ಬಂದಾಗ ಅನೇಕ ದೇವಾಲಯಗಳು ನಿರ್ಮಾಣಗೊಂಡಿವೆ. ಇದಕ್ಕೂ ಪೂರ್ವದಲ್ಲಿ ಮಾನವ ತನ್ನ ಸುತ್ತಲಿನ ನಿಸರ್ಗದಲ್ಲಿ ನಡೆಯುವ ಬದಲಾವಣೆಗಳ ಹಿನ್ನೆಲೆಯಲ್ಲಿ ವೀಕ್ಷಿಸಿದಾಗ ತನಗೆ ಕಾಣದ ಯಾವದೋ ಶಕ್ತಿ ತನ್ನನ್ನು ನಡೆಸುತ್ತಿದೆ ಎಂಬ ಭಾವನೆ ಮೂಡಿದಾಗ ಅವನಲ್ಲಿ ಭಯ ಭಕ್ತಿ ಗೌರವಕ್ಕೊಂದು ರೂಪ ಕೊಡಲು ಪ್ರಯತ್ನಿಸಿ, ಪ್ರಕೃತಿಯಲ್ಲಿ ಕಂಡು ಬರುವ ಸೂರ್ಯ, ಚಂದ್ರ, ಗಿಡ, ಮರ, ನದಿ ಮುಂತಾದವುಗಳಲ್ಲಿ ಪೂಜ್ಯ ಭಾವನೆ ಮೂಡಿ ಪೂಜಾಸ್ಥಾನಗಳು ನಿರ್ಮಾಣವಾದವು. ಈ ಸ್ಥಳಗಳಿಗೆ ರಕ್ಷಣಾತ್ಮಕವಾಗಿ ಚೌಕಟ್ಟನ್ನು ನಿರ್ಮಿಸಲು ಪ್ರಾರಂಭಿಸಿದಾಗ ಇದು ಮುಂದೆ ದೇವಾಲಯಗಳ ಹುಟ್ಟಿಗೆ ಕಾರಣವಾಯಿತು. ದೇವರ+ಆಲಯ ದೇವಾಲಯ ಆಲಯ ಎಂದರ ಕಟ್ಟಡ ಸಮಾಜದ ಅವಿಭಾಜ್ಯ ಅಂಗವಾಗಿರುವ ದೇವಾಲಯಗಳು ಇಂದಿಗೂ ಕೆಲವು ಸ್ಥಳಗಳು ಪವಿತ್ರಗೊಂಡು ಪುಣ್ಯಸ್ಥಳಗಳಾಗಿ ಪ್ರಾವಾಸಿ ತಾಣಗಳಾಗಿ ಪ್ರಸಿದ್ಧತೆಯನ್ನು ಪಡೆದುಕೊಂಡಿವೆ. ಪ್ರಾರಂಭದಲ್ಲೆಲ್ಲ ಚಿಕ್ಕ ಚಿಕ್ಕ ಮಂಟಪವನ್ನು ಹೊಂದಿದ ಇವು ಕಾಲಗತಿಸಿದಂತೆಲ್ಲ ಮೊದಲು ಹೇಳಿದ ಹಾಗೆ ಅರಸರುಗಳ ಕಾಲಕ್ಕೆ ಪೂಜಾ ವಿಧಿ-ವಿಧಾನಗಳು ಆಚಾರ-ವಿಚಾರಗಳು ಹೆಚ್ಚುತ್ತಾ ಹೋದಂತೆಲ್ಲ ಗಾತ್ರದಲ್ಲಿ ದೇವಾಲಯಗಳು ವಿಶಾಲರೂಪವನ್ನು ಪಡೆದುಕೊಂಡವು ಮಾನವ ಗುಡ್ಡ ಪ್ರದೇಶಗಳಲ್ಲಿ ದೊಡ್ಡ ದೊಡ್ಡ ಗಾತ್ರದ ಬಂಡೆಕಲ್ಲುಗಳ ನಡುವೆ ಗುಹಾಂತರ ಮೊದಲೆಲ್ಲಾ ದೇವಾಲಯಗಳನ್ನು ನಿರ್ಮಾಣ ಮಾಡುತ್ತಿದ್ದನು. ನಂತರದ ಕಾಲದಲೆಲ್ಲಾ ವಿಶಾಲವಾದ ಆವರಣ ಹೊಂದಿದ ಬಯಲಿನಲ್ಲಿ ದೇವಾಲಯಗಳನ್ನು ನಿರ್ಮಿಸಲು ಮುಂದಾದನು. ಇಂದು ಇವು ಯಾತ್ರಿಕರನ್ನು ಕೈ ಬಿಸಿ ಕರೆಯುವ ಪುಣ್ಯ ಪವಿತ್ರ ಸ್ಥಳಗಳಾಗಿವೆ.

**ಶಾಸನಗಳಲ್ಲಿ ಉಲ್ಲೇಖಗೊಂಡಿರುವ ದೇವಾಲಯಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.**

| ಕ್ರ.ಸ. | ಊರು | ದೇವಾಲಯ | ವ್ಯಕ್ತಿಯ ಹೆಸರು | ದಾನ ಅಥವಾ ನಿರ್ಮಿಸಿದವ | ಕ್ರಿ.ಶ. | ಸ್ಥಳ |
|---|---|---|---|---|---|---|
| ೧. | ಮಾನ್ವಿ | ಹನುಮಂತ | ಮಲ್ಲಿನೇನೆಯಮಗ ಸಿಂಗಣ | ಪ್ರತಿಷ್ಠಾಪಿಸಿದ | ೧೭೬೦ | ವಕ್ರಾಣಿ ಕೆರೆ |
| ೨. | ತಡಕಲ್ | ರಾಮಲಿಂಗೇಶ್ವರ | ಬಿಜ್ಜಲದೇವಿ(ರಾಣಿ) | ದಾನ | ೧೦೩೩ | - |
| ೩. | ಚೀಕಲಪರ್ವಿ | ತಿರುಬೆಂಗಳನಾಥ | ಕೃಷ್ಣದೇವರಾಯ | ದಾನ | ೧೫೨೧ | - |
| ೪. | ದದ್ದಲ | ಗಿರಿಕೋಟೆಮಲ್ಲ ಜಿನಾಲಯ | ಮಾಕಿಸೆಟ್ಟಿ | ಕಟ್ಟಿಸುತ್ತಾನೆ | ೧೦೬೯ | ಪದ್ದಲಿ ಪನ್ನೂರು |
| ೫. | ಮಲ್ಲಿಗೆ ಮಡವು | ಈಶ್ವರ | ಪುಳಿಯಮ್ಮ | ದಾನ | ೧೦ನೇ ಶತಮಾನ | - |
| ೬. | ಸುಂಕೇಶ್ವರ | ಬೊಕ್ಕೇಶ್ವರ | ಉದಯಾದಿತ್ಯ | ದಾನ | ೧೦೯೭ | - |

| | | | | | | |
|---|---|---|---|---|---|---|
| ೭. | ಕುರುಡಿ | ನಿಂಬಣೇಶ್ವರ | ನಿಂಬಣಯ್ಯ | ದಾನ | ೧೧೨೩ | – |
| ೮. | ಕುರುಡಿ | ಶಂಕರೇಶ್ವರ ನಾಗೇಶ್ವರ | ನಾಗಲದೇವಿ (ನಿಂಬಣಯ್ಯನಮಗಳು) | | | |
| ೯. | ಕುರುಡಿ | ಪಲ್ಲವೇಶ್ವರ | – | ದಾನ | ೧೧೯೨ | ನೀಲಗುಡಿ ರುವ ಶಾಸನ ದ ಉಲ್ಲೇಖ |
| ೧೦. | ಕುರುಡಿ | ರೆಬ್ಬಲೇಶ್ವರ | ರವಿಯಣಭಟ್ಟ | ಪ್ರತಿಷ್ಠಾಪಿಸಿದ್ದು | ೧೨ನೇ ಶತಮಾನ | – |
| ೧೧. | ಕಪ್ಪಗಲ್ | ಬೋಗೇಶ್ವರ | ಪಂಪಾದೇವಿ(ರಾಣಿ) | ದಾನ | ೧೧೦೪ | – |
| ೧೨. | ಹರವಿ | ಸ್ವಯಂಭಣ ದೇವಾಲಯ | – | ದಾನ | ೧೧೦೭ | – |
| ೧೩. | ಕಲ್ಲೂರು | ಮಾರುಟೇಶ್ವರ | ಬೂಚಿದೇವರಸ | ದಾನ | ೧೧೮೦ | – |
| ೧೪. | ಸಿರಿವಾರ | ಹನುಮಂತದೇವರು | | ಗುರುರಾಯ | ಪ್ರತಿಷ್ಠಾಪಿಸಿದ೧೯೯೩ | – |
| ೧೫. | ಬಲ್ಲಟಗಿ | ವಿಷ್ಣುದೇವಾಲಯ | ಸೋಮಲಾದೇವಿ(ರಾಣಿ) ಕಕ್ಕಹೆಗಡೆ ಕಕ್ಕಪಯು | ಕಟ್ಟಿರುವುದು | ೧೦೨೮ | – |
| ೧೬. | ಬಲ್ಲಟಗಿ | ಬಸದಿ | ಸೋಮಲಾದೇವಿ | ದಾನ | ೧೦೨೯ | – |
| ೧೭. | ಬಲ್ಲಟಗಿ | ತ್ರೈಪುರುಷ ದೇವಾಲಯ | ಮಹಾದೇವಿ(ರಾಣಿ) | ದಾನ | ೧೦೨೨ | – |
| ೧೮. | ಬಲ್ಲಟಗಿ | ಚಂದೇಶ್ವರ ದೇವಾಲಯ | ಕಂಪಣ | ದಾನ | ೧೦೩೬ | – |
| ೧೯. | ಬಲ್ಲಟಗಿ | ಪಾಪೇಶ್ವರ ದೇವಾಲಯ | ಗಾವುಂಡ | ದಾನ | ೧೧ನೇ ಶತಮಾನ | – |
| ೨೦. | ಬಲ್ಲಟಗಿ | ಕಲಿದೇವರು | ಚಮದುದೇವಿ(ರಾಣಿ) | ದಾನ | ೧೪೫ | – |
| ೨೧. | ಬಲ್ಲಟಗಿ | ಬಂಕೇಶ್ವರ | ಸೋಮಲದೇವಿ(ರಾಣಿ) | ದಾನ | ೧೦೩೬ | – |
| ೨೨. | ಮಲ್ಲಟ | ಮಹೇಶ್ವರ | ಮಲ್ಲದೇವರಸ | ದಾನ | ೧೧೯೬ | – |
| ೨೩. | ಮಲ್ಲಟ | ಮಲ್ಲಿಕಾರ್ಜುನ ದೇವರು | ಘಟ್ಟದೇವರಸ | ದಾನ | ೧೧೪೮ | – |
| ೨೪. | ವಡವಾಟಿ | ತಿಮ್ಮಪ್ಪ ದೇವರು | ಸಮಸ್ತ ಪ್ರಜೆಗಳು | ದಾನ | ೧೬ನೇ ಶತಮಾನ | – |
| ೨೫. | ಕವುತಾಳ | ಹಲ್ಲೇಶ್ವರ | ಮಲ್ಲದೇವರಸ | ದಾನ | ೧೨೧೭ | – |
| ೨೬. | ಕವುತಾಳ | ತ್ರಯಾಂಬಕೇಶ್ವರ ದೇವಾಲಯ | ಯೋಗೀಶ್ವರ | ದಾನ | ೧೨೧೭ | – |

## ಕಲ್ಲೂರು ಮಾರುಟೇಶ್ವರ ದೇವಾಲಯ

ಜೀರ್ಣೋದ್ಧಾರಗೊಂಡಿರುವ ಈ ದೇವಾಲಯ ಎತ್ತರದ ಜಗಲಿಯ ಮೇಲೆ ಪೂರ್ವಭಿಮುಖವಾಗಿದೆ. ಕ್ರಿ.ಶ.೧೧೮೦ರಿಂದ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವಾಗಿದೆ. ಈ ದೇವಾಲಯದ ಹೊರಭಾಗವು ಅದಿಷ್ಠಾನವನ್ನು ಹೊಂದಿದೆ. ಇದರ ಶಿಖರವು ಕೀರ್ತಿಮುಖದ ಅಲಂಕಾರ ಹೊಂದಿದೆ. ಇದು ಕಲ್ಯಾಣ ಚಾಲುಕ್ಯರ ಶೈಲಿ ಹೊಂದಿದ ದೇವಾಲಯವಾಗಿದೆ. ಇದರ ವಿಶಾಲವಾದ ಆವರಣದ ಸುತ್ತಮುತ್ತ ಆರು ಚಿಕ್ಕ ಚಿಕ್ಕ ಗುಡಿಗಳಿವೆ. ಮೆಟ್ಟಿಲು ಸೋಪಾನವನ್ನು ಹೊಂದಿರುವ ಜಗಲಿಯ

ಮೇಲೆ ಈಶ್ವರನಿಗೆ ಎದುರಾಗಿ ನಂದಿಯ ಮೂರ್ತಿಯು ಇದ್ದು ಇದರ ಮುಂದೆ ಜೀರ್ಣಗೊಂಡಿರುವ ಪ್ರದೇಶದ್ವಾರವಿದೆ.

ಮಾರುಟೇಶ್ವರ ದೇವಾಲಯದ ಗರ್ಭಗೃಹ ಚೌಕಾಕಾರವಾಗಿದ್ದು ಶಿವಲಿಂಗವನ್ನು ಹೊಂದಿದ. ಪಾಣಿ ಪೀಠವಿದೆ. ಭುವನೇಶ್ವರಿ ಅಷ್ಠಾಕೋನಕಾರವಾಗಿದೆ. ಗರ್ಭಗೃಹಕ್ಕೆ ತಾಗಿಕೊಂಡಿರುವ ಕೋಣೆಯನ್ನು ಅಂತರಾಳ ಎಂದು ಕರೆಯುತ್ತಾರೆ. ಅಂತರಾಳವು ಆಯಾತಕಾರವಾಗಿದ್ದು ಇದಕ್ಕೆ ಹೊಂದಿಕೊಂಡಿರುವ ಕೋಣೆಯನ್ನು ನವರಂಗವೆಂದು ಕರೆಯುತ್ತಾರೆ. ಈ ನವರಂಗವು ೪ ಕಂಬಗಳಿಂದ ಕೂಡಿದೆ. ಇದರ ಸುತ್ತಲೂ ಒಳ ಭಿತ್ತಿಯಲ್ಲಿ ಕಂಬಂಗಳಿವೆ. ಇಲ್ಲಿಯೇ ದೇವಾಲಯದ ಎಡಬಲಗಳಲ್ಲಿ ಒಳಗೋಡೆಗೆ ನಿಲ್ಲಿಸಲಾದ ಎರಡು ಎತ್ತರವಾದ ಶಾಸನಗಳಿವೆ. ಇವು ೬ನೇ ವಿಕ್ರಮಾದಿತ್ಯನ ಕಾಲದ್ದಾಗಿವೆ. ನವರಂಗ ಪ್ರವೇಶಿಸುವ ದ್ವಾರದಲ್ಲಿ ದೊಡ್ಡದಾದ ನಂದಿಯು ಶಿವಲಿಂಗಕ್ಕೆ ಅಭಿಮುಖವಾಗಿದೆ. ಒಟ್ಟಿನಲ್ಲಿ ಈ ದೇವಾಲಯ ಚೌಕಾಕಾರದ ಜಗಲಿಯ ಕಟ್ಟೆ ಪ್ರವೇಶ ಮಂಟಪ ಗರುಡಗಂಬ, ನಂದಿ, ನವರಂಗ ಅಂತರಾಳ ಗರ್ಭಗೃಹಗಳನ್ನು ಒಳಗೊಂಡಿದ್ದು. ಇದರ ಹಿಂದೆ ಕಗ್ಗಲ್ಲಿನ ಬೆಟ್ಟವಿದ್ದು ಕೊತ್ತಲವೂ ಕಂಡು ಬರುತ್ತದೆ.

**ಕುರುಡಿ**

**ಊರು** – ಕುರುಡಿ **ಸ್ಮಾರಕ** – ಶಂಕರಲಿಂಗೇಶ್ವರ ದೇವಾಲಯ

**ಸ್ಥಳ** – ಅಗಸಿಯ ಹತ್ತಿರ **ಕಾಲ** –

ಶಾಸನಗಳಲ್ಲಿ ದಂಡನಾಯಕ ನಿಂಬಣಯ್ಯ ಕಟ್ಟಿಸಿರುವ ನಿಂಬಣೇಶ್ವರ ದೇವಾಲಯ ಎಂದು ಉಲ್ಲೇಖಗೊಂಡಿರುವ ಇದು ಈಗ ಶಂಕರಲಿಂಗೇಶ್ವರ ದೇವಾಲಯವೆಂದು ಕರೆಯಲಾಗುತ್ತಿದ್ದು ಇದಕ್ಕೆ ಪೂರ್ವ ದ್ವಾರ ಬಾಗಿಲಿದೆ. ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ಈ ದೇವಾಲಯದ ಗರ್ಭಗೃಹವು ಚೌಕೌಕೌರವಾಗಿದ್ದು ಉತ್ತರಕ್ಕೆ ಮುಖವಾಗಿರುವ ಎತ್ತರವಾದ ಪೀಠದ ರುದ್ರರ ಭಾಗದಲ್ಲಿ ಶಿವಲಿಂಗವಿದ್ದು. ಪಾಣಿ ಪೀಠವನ್ನು ಹೊಂದಿದೆ. ಗರ್ಭಗೃಹದ ಬಾಗಿಲ ಮೇಲೆ ಗಜಲಕ್ಷ್ಮಿ ಚಿತ್ರವಿದೆ. ತೆರೆದ ಅಂತರಾಖದಲ್ಲಿ ಎರಡು ಕಂಬಗಳಿವೆ ನಂದಿಯು ಶಿವಲಿಂಗಕ್ಕೆ ಅಭಿಮುಖವಾಗಿದೆ. ಇದಕ್ಕೆ ಹೊಂದಿಕೊಂಡಿರುವ ನಾಲ್ಕು ಕಂಬಗಿಳಿಂದ ಕೂಡಿದ ನವರಂಗವಿದೆ. ತಳಭಾಗದಲ್ಲಿ ಪೀಟ ಹೊಂದಿದ್ದು ಅದರ ಮೇಲೆ ಆಯಾತಾಕಾರವಾಗಿದ್ದು ಮದ್ಯದಲ್ಲಿ ಚೌಕಾಕಾರವಿದೆ ಮೇಲ್ಭಾಗದಲ್ಲಿ ದುಂಡಾಗಿರುವ ಬೋಧಿಗೆಗಳನ್ನು ಹೊಂದಿದ ಕಂಬಗಳಿವೆ. ತೆರೆದ ಅಂತರಾಳದ ಎಡಬಲಗಳಲ್ಲಿ ಕೋಷ್ಠಗಳು ಖಾಲಿಯಾಗಿವೆ. ಅಂತರಾಳದ ನಂದಿ ಮೂರ್ತಿಯ ಬಲ ಮಗ್ಗಲಿನಲ್ಲಿ ಕಲ್ಲಿನ ಮೇಲೆ ಕೆತ್ತಲಾದ ಹೊಯ್ಸಳರ ಲಾಂಛನವಿದೆ. ಈ ಓಂದೆ ರಾಷ್ಟ್ರಕುಟರ ಆಳ್ವಿಕೆ ಇತ್ತು ಎನ್ನುವುದಕ್ಕೆ ಸಾಕ್ಷಿಯಂತಿದೆ. ಆನೆಗಳ ಮೆಟ್ಟಿಲುಗಳ ಸೋಪಾನವ ಪ್ರವೇಶ ದ್ವಾರವಿದೆ ಮೆಟ್ಟಿಲುಗಳ ಎಡ ಬಲಗಳಲ್ಲಿ ಆನೆಗಳ ಶಿಲ್ಪಗಳನ್ನು ಕೆತ್ತಲಾಗಿದೆ.

**ಊರು** – ಕುರುಡಿ **ಸ್ಮಾರಕ** – ರಾಮಲಿಂಗೇಶ್ವರ

**ಸ್ಥಳ** – ಅಗಸಿಯ ಹತ್ತಿರ **ಕಾಲ** –

ಈ ದೇವಾಲಯವು ದಕ್ಷಿಣಾಭಿಮುಖವಾಗಿ ಮೆಟ್ಟಿಲುಗಳ ಸೋಪಾನ ಹೊಂದಿದ ಜಗಲಿಯ ಮೇಲೆ ನಿರ್ಮಾಣಗೊಂಡಿದ್ದು ವಿಜಯನಗರ ಕಾಲದ್ದಾಗಿದ್ದು ಗರ್ಭಗುಡಿ ಚೌಕಾಕಾರದಲ್ಲಿದ್ದು ಒಳಭಾಗದಲ್ಲಿ ಶಿವಲಿಂಗವಿದ್ದು ಅದಿಷಾನವನ್ನು ಹೊಂದಿದೆ. ಇದಕ್ಕೆ ಹೊಂದಿಕೊಂಡಂತೆ ತೆರೆದ ಸಭಾಮಂಟಪವಿದೆ. ಗರ್ಭಗುಡಿಯ ಎಡಬಲಗಳಲ್ಲಿ ದ್ವಾರಪಾಲಕರಿದ್ದಾರೆ. ಇದಲ್ಲದೆ ಎರಡು ಕಡೆಗಳಲ್ಲಿ ಮೂರ್ತಿಶಿಲ್ಪಗಳಿವೆ. ನಂದಿಯು ರಾಮಲಿಂಗೇಶ್ವರ (ಶಿವಲಿಂಗ)ನಿಗೆ ಎದುರಾಗಿ ಇದೆ. ಇದರ ಮುಂದೆ ಹಾಸುಗಲ್ಲಿನ ಮೇಲೆ ಮಹಿಳೆಯೊಬ್ಬಳು ಉದ್ದಂಡ ನಮಸ್ಕಾರ ಹಾಕಿರುವ ಶಿಲ್ಪವಿದೆ. ಈ ದೇವಾಲಯವು ಅದಿಷ್ಠಾನವನ್ನು ಹೊಂದಿದ್ದು ಭಿತ್ತಿಯಲ್ಲಿ ಸುತ್ತಲೂ ಉಬ್ಬು ಚಿತ್ರಗಳಿವೆ. ಪ್ರದಕ್ಷಣಾ ಪಥವಿದ್ದು ಗರ್ಭಗುಡಿಯ ಮೇಲ್ಭಾಗದಲ್ಲಿ ಗೋಪುರ ಹೊಂದಿದೆ.

**ಊರು** – ಕುರುಡಿ **ಸ್ಮಾರಕ** – ಈಶ್ವರ ದೇವಾಲಯ

**ಸ್ಥಳ** – ಶಿವಲಿಂಗೇಶ್ವರ ದೇವಾಲಯ ದಕ್ಷಿಣಕ್ಕೆ **ಕಾಲ** –

ಈಶ್ವರ ದೇವಾಲಯವು ಮೆಟ್ಟಿಲು ಸೋಪಾನವನ್ನು ಹೊಂದಿದ್ದು ಪೂರ್ವಭಿಮುಖವಾಗಿದೆ. ಮೆಟ್ಟಿಲುಗಳು ಸೋಪಾನವನ್ನು ಹೊಂದಿ ಜಗಲಿಯ ಮೇಲೆ ಸ್ಥಾಪಿಸಲಾಗಿದೆ. ಇದರ ತಳಭಾಗ ಉಪಾನದಿಂದ ಕಪೋತದವರೆಗೆ ಇದೆ. ಗರ್ಭಗೃಹದಲ್ಲಿ ನೆಲಮಟ್ಟದ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಸರಳವಾದ ಬಾಗಿಲನ್ನು ಹೊಂದಿದು ಚೌಕಾಕಾರದಲ್ಲಿದೆ. ಮುಂದೆ ತೆರೆದಸಭಾ ಮಂಟಪವಿದ್ದು ಪೂರ್ವ ಮತ್ತು ಉತ್ತರಕ್ಕೆ ತೆರೆದುಕೊಂಡಿದೆ. ಮುಂದೆ ಲಿಂಗಕ್ಕೆ ಎದುರಾಗಿ ದೊಡ್ಡ ಗಾತ್ರದ ನಂದಿ ಮೂತಿಯಯು ಇದ್ದು ಕೊರಳೊಳಗೆ ಗಂಟೆಸರ ಹಣೆಪಟ್ಟಿ ಎತ್ತರದ ಭುಜ ಆಲಂಕೃತವಾದ ಹೊದಿಕೆಯನ್ನು ಹೊದಿಸಲಾಗಿದೆ. ಇಲ್ಲಿ ಪ್ರತಿಷ್ಠಾಪಿತವಾಗಿರುವ ಲಿಂಗವು ಬಿಳಿಯ ಬಣ್ಣದ್ದಾಗಿದೆ. ನಂದಿ ವಿಗ್ರಹದ ಎಡಭಾಗದ ಕಂಬದ ಮೇಲೆ ಎರಡು ಮಗ್ಗಲಿನಲ್ಲಿ ಒಂದು ಶಾಸನವನ್ನು ಕೆತ್ತಲಾಗಿದೆ. ಇದು ಕ್ರಿ.ಶ.೧೧೨೩ರ ಶಾಸನವಾಗಿದ್ದು ಚಾಲುಕ್ಯರ ದಂಡನಾಯಕ ನಿಂಬಣಿಶ್ವರನು ಕಟ್ಟಿಸಿರುವ ನಿಂಬಣೇಶ್ವರ ದೇವಾಲಯಕ್ಕೆ ದಾನ ನೀಡಿರುವುದು ತಿಳಿದು ಬರುತ್ತದೆ. ಗರ್ಭಗೃಹದ ಬಾಗಿಲ ಮೇಲೆ ಗಜಲಕ್ಷ್ಮಿಯ ಉಬ್ಬು ಚಿತ್ರವಿದ್ದು. ದೇವಾಲಯದ ಹೊರಭಾಗ ಬಲ ಭಿತ್ತಿಯು ಅರ್ಧ ಮತ್ತು ಪೂರ್ಣ ಗಂಬಗಳಿಂದ ಅಲಂಕೃತವಾಗಿದೆ. ಈ ಭಾಗದಲ್ಲಿ ತಗ್ಗನ್ನು ತೋಡಿ ಹಾಗೆ ಬಿಡಲಾಗಿದೆ. ಇದರ ಬಲ ಭಾಗದಲ್ಲಿ ದೇವಾಲಯವಿದ್ದು ಉತ್ತರ ದಕ್ಷಿಣಕ್ಕೆ ಮುಖಮಾಡಿದೆ. ಯಾವುದೇ ರೀತಿಯ ಮೂರ್ತಿ ಲಿಂಗ ಕಂಡು ಬರುವುದಿಲ್ಲ. ಇದು ರಾಷ್ಟ್ರಕೂಟರ ಸೇರಿದ್ದಾಗಿದೆ. ಈ ದೇವಾಲಯದ ಎಡಭಾಗದ ಎರಡು ಶಾಸನಕಲ್ಲುಗಳನ್ನು ಇಡಲಾಗಿದೆ. ಇದರ ಮುಂದೆ ಪೂರ್ವಕ್ಕೆ ನಾಗ-ನಾಗಿಣಿಯರ ಶಿಲ್ಪಗಳಿವೆ ಇದೇ ಊರಿನಲ್ಲಿ ಈಶ್ವರ ದೇವಾಲಯವಿದ್ದು. ಈಗ ಇದು ಅರ್ಧದಷ್ಟು ಮಣ್ಣಲ್ಲಿ ಮುಚ್ಚಿಹೋಗಿದೆ. ಇದರ ಗರ್ಭಗುಡಿಯಲ್ಲಿ ಮುಖವಿರುವ ಈಶ್ವರ ಪೀಠದ ರುದ್ರಭಾಗದಲ್ಲಿ ಬಿಳಿಕಲ್ಲಿನಲಿಂಗವಿದೆ. ಇದರ ಎರಡು ಪಕ್ಕದಲ್ಲಿ ಹಿಂದೆ ಕೊಳವೆಯಾಕಾರದ ಶಿವಲಿಂಗಗಳಿವೆ.

**ಊರು** – ಕಪ್ಪಗಲ್ **ಕಾಲ** – ೧೧೬೯

**ಸ್ಥಳ** – ಊರು ಬಾವಿಯ ಪಕ್ಕದಲ್ಲಿ **ಅಭಿಮುಖ** – **ಪೂರ್ವಭಿಮುಖ**

**ಸ್ಮಾರಕ** – ರಾಮಲಿಂಗೇಶ್ವರ ದೇವಾಲಯ **ಸ್ಥಿತಿ** – **ಉತ್ತಮ**

ಎತ್ತರದ ಜಗಲಿಯ ಮೇಲೆ ಇದ್ದು ಮೆಟ್ಟಿಲುಗಳ ಸೋಪಾನವನ್ನು ಒಳಗೊಂಡ ಈ ದೇವಾಲಯ ಪೂರ್ವಭಿಮುಖವಾಗಿ ಜೀರ್ಣೋದ್ದಾರಗೊಂಡಿದೆ, ಗರ್ಭಗುಡಿಯಲ್ಲಿ ಈ ಶಿವಲಿಂಗವಿದ್ದು ಇದರ ಮುಂದೆ ಸಭಾ ಮಂಟಪವಿದ್ದು ಬಲಗಡೆ ಗಣೇಶ, ದೇವಿ, ಮೂರ್ತಿಗಳನ್ನು ಇಡಲಾಗಿದೆ. ೪ ಕರಿ ಕಂಬಗಳ ಸಭಾಮಂಟಪವನ್ನು ಒಳಗೊಂಡಿದೆ. ಮೇಲ್ಭಾಗದ ನಾಲ್ಕು ಮೂಲೆಗಳಲ್ಲಿ ನಂದಿ ವಿಗ್ರಹಗಳನ್ನು ಕಾಣಬಹುದಾಗಿದೆ. ಪ್ರದಕ್ಷಣ ಪಥವಿದ್ದು. ಚೌಕಾಕಾರದ ಸುರಳಿಯಾಕಾರದ ಕಂಬಗಳಿವೆ. ದೇವಾಲಯದ ಬಲಗಡೆ ಹೊಲ ಗದ್ದೆಗಳಿದ್ದು ಎಡಭಾಗದಲ್ಲಿ ಊರು ಬಾವಿ ಮತ್ತು ವೈಷ್ಣವ ದೇವಾಲಯವಿದೆ. ಬಾವಿಯ ಮೇಲೆ ಶಾಸನವಿದ್ದು ಕ್ರಿ. ಶ. ೧೧೬೯ರ ಕಲ್ಯಾಣ ಚಾಲುಕ್ಯರಸ ಭುವನೈಕ್ಯಮಲ್ಲನ ಕಾಲದ್ದಾಗಿದೆ.. ಪಂಪಾದೇವಿ ಈ ದೇವಾಲಯಕ್ಕೆ ಭೂಮಿಯನ್ನು ದಾನ ನೀಡಿರುವುದು ಈ ಶಾಸನದಲ್ಲಿ ಬೋಗೇಶ್ವರ ಎಂದು ಉಲ್ಲೇಖಿಸಿದೆ. ಈಗ ಇದು ರಾಮಲಿಂಗೇಶ್ವರ ಅಥವಾ ಈಶ್ವರ ದೇವಾಲಯ ಎಂದು ಕರೆಯಲಾಗಿದೆ.

**ಊರು** – ಹರವಿ **ಕಾಲ** –

**ಸ್ಥಳ** – ಊರು ಬಿಟ್ಟು ಬಂಡೆಗಳ ಮೇಲೆ ಸ್ಥಾಪಿಸಲಾಗಿದೆ **ಸ್ಥಿತಿ** – **ಉತ್ತಮ**

**ಸ್ಮಾರಕ** – ಬಸವಣ್ಣ ದೇವಾಲಯ **ದಿಕ್ಕು** – ಪೂರ್ವಾಭಿಮುಖ ಮತ್ತು ಉತ್ತರಾಭಿಮುಖವನ್ನು ಹೊಂದಿದೆ.

ಈ ದೇವಾಲಯ ತ್ರಿಕೂಟ ದೇವಾಲಯವಾಗಿದ್ದು ಉತ್ತರಾಭಿಮುಖವಾಗಿದೆ. ದೇವಾಲಯ ಬಲಭಾಗದಲ್ಲಿ ಈಶ್ವರವಿದೆ. ಪೂರ್ವದಲ್ಲಿರುವ ದೊಡ್ಡದಾದನಂದಿಯು ಈಶ್ವರಿನಿಗೆ ಅಭಿಮುಖವಾಗಿದ್ದಾನೆ. ನಾಲ್ಕು ಕಂಬಗಳ ನವರಂಗವಿದ್ದು ಕೆಳಭಾಗದ ಪೂರ್ವದಲ್ಲಿ ನಂದಿಯಿದೆ ಉತ್ತರಕ್ಕೆ ಮುಖಮಾಡಿರುವ ಗರ್ಭಗುಡಿ ಇದೆ. ವೀರಭದ್ರೇಶ್ವರನ ಸುತ್ತಲು ಇರುವ ಕಂಬಗಳ ಪೀಠವು ಆಯಾತಕಾರ ಚೌಕಾಕಾರ ಸುರುಳಿಯಾಕಾರ ಬೋಧಿಗೆಯನ್ನು ಹೊಂದಿವೆ ನಂದಿಯನ್ನು ತುಳಿದು ಒಳಬರುತ್ತಾರೆ ಜನ ಎಂದು ಪೂರ್ವದ ಬಾಗಿಲನ್ನು ಮುಚ್ಚಿ ಉತ್ತರ ಬಾಗಿಲನ್ನು ತೆರೆಯಲಾಗಿದೆ. ಉತ್ತರದ ಕಲ್ಲು ಬಂಡೆಯ ಮೇಲೆ ಈ ದೇವಾಲಯನ್ನು ನಿರ್ಮಿಸಲಾಗಿದೆ. ತಳವಿಲ್ಲದ ಈ ದೇವಾಲಯವು ಉಪಾನದಿಂದ ಕಪೋತದವರೆ ಇದ್ದು ಮೇಲೆ ಭಿತ್ತಿಯನ್ನು ಮೂರು ಗೋಪುರಗಳನ್ನು ಒಳಗೊಂಡ ಪಾಂಸನ ರೀತಿಯದು. ಉತ್ತರ ಬಾಗಿಲಿನ ಮುಂಭಾಗದಲ್ಲಿ ಗಣೇಶನ ಇತ್ತೀಚಿನ ದೇವಾಲಯವನ್ನು ಕಟ್ಟಿಲಾಗಿದ್ದು ಇದರ ಪಕ್ಕದಲ್ಲಿ ಮಲ್ಲಿಕಾರ್ಜುನ ದೇವಾಲಯವು ಗರ್ಭಗುಡಿ ನಾಲ್ಕು ಕಂಬಗಳ ನವರಂಗವನ್ನು ಹೊಂದಿದ್ದು ಮುಂದೆ ವಿಶಾಲವಾದ ಆವರಣದಲ್ಲಿ ಸಿಡಿಲಬಾವಿಯಿತ್ತು. ಈಗ ಇದನ್ನು ಮುಚ್ಚಲಾಗಿದೆ. ಕಾರಣ ಇಲ್ಲಿ ಮದುವೆಗಳು ಜರುಗುವುದರಿಂದ ಮುಚ್ಚಲಾಗಿದೆ.

**ಊರು** – ಬಾಗಲವಾಡ **ಸ್ಮಾರಕ** – ರಾಮಲಿಂಗೇಶ್ವರ

**ಸ್ಥಳ** – ರಸ್ತೆಯ ಸಮೀಪ

ಉತ್ತರದ ಜಗಲಿಯ ಮೇಲೆ ಎರಡು ಮೆಟ್ಟಿಲುಗಳ ಸೋಪಾನವನ್ನು ಹೊಂದಿದ ಈ ದೇವಾಲಯ ದಕ್ಷಿಣಾಭಿಮುಖವಾಗಿದ್ದು. ದಕ್ಷಿಣಕ್ಕೆ ಎರಡು ಗರ್ಭಗುಡಿಗಳು ಮುಖ ಹೊಂದಿದ್ದರೆ ಇನ್ನೊಂದು ದಕ್ಷಣಕ್ಕೆ ಮುಖ ಹೊಂದಿದ ತ್ರಿಕೂಟ ದೇವಾಲಯವಾಗಿ ನಯಗೊಳಿಸಲಾದ ಕಲ್ಲುಗಳಿಂದ ಈ ಗರ್ಭಗುಡಿಗಳನ್ನು ನಿರ್ಮಿಲಾಗಿದೆ. ಅಂತರಾಳ ಒಳಗೊಂಡಿಲ್ಲ. ಮೂರು ಗರ್ಭಗುಡಿಗಳಲ್ಲಿ ಶಿವಲಿಂಗವನ್ನು ಹೊಂದಿವೆ. ರಾಷ್ಟ್ರ ಕೂಟರ ಕಾಲದ ಕಂಬದಂತೆ ಕಾಣುತ್ತವೆ. ದಕ್ಷಿಣಕ್ಕೆ ನಿಂತು ನೋಡಿದರೆ ಕಮಲ ದೇವಾಲಯವೆನ್ನುಂತೆ ಮತ್ತು ಸಾಲುಗಂಬಗಳಂತೆ ನೋಡಲು ಸುಂದರವಾಗಿ ಕಾಣಗೋಳಿಸುತ್ತದೆ. ಗರ್ಭಗುಡಿಯ ಮುಂದಿನ ಕಂಬಗಳ ನಡುವೆ ಕೂಡಲು ಜಗಲಿಯಂತೆ ನಿರ್ಮಿಸಲಾಗಿದೆ. ಇದು ಅಧಿಷ್ಠಾನವನ್ನು ಹೊಂದಿದ್ದು ದೆವಾಲಯದ ಮೇಲ್ಭಾವಣಿಯಲ್ಲಿ ಭುವನೇಶ್ವರಿಯ ಶಿಲ್ಪಗಳಿಂದ ಅಲಂಕೃತವಾಗಿದೆ ಬಾಗಿಲವಾಡದ ಲಾಲಟದಲ್ಲಿ ಗಜ ಲಕ್ಷ್ಮಿಯ ಸುಂದರವಾದ ಉಬ್ಬು ಶಿಲ್ಪವಿದೆ.

**ಊರು** – ಬಾಗಲವಾಡ **ಸ್ಮಾರಕ** – ರಾಮಲಿಂಗೇಶ್ವರ

**ಸ್ಥಳ** – ರಸ್ತೆಯ ಬಲಗಡೆ ಊರು
ಒಳಗಡೆ ಹೋಗುವ ರಸ್ತೆಯಲ್ಲಿ

ಎತ್ತರದ ಜಗಲಿಯ ಮೇಲೆ ಮೆಟ್ಟಿಲುಗಳ ಸೋಪಾನವನ್ನು ಹೊಂದಿದ ಪೂರ್ವಭಿಮುಖ ಹೊಂದಿದ ದೇವಾಲಯವಾಗಿದೆ. ಮೆಟ್ಟಲುಗಳ ಎಡಬಲಗಳಲ್ಲಿ ಆನೆಗಳ ಶಿಲ್ಪಗಳಿವೆ. ಚೌಕಾಕಾರದ ಗರ್ಭಗೃಹದಲ್ಲಿ ಗೋಲಾಕಾರದ ಪೀಠದ ಮೇಲೆ ರುದ್ರಭಾಗದಲ್ಲಿ ಪಾಣಿಪೀಠದ ಶಿವಲಿಂಗವಿದೆ. ಇದಕ್ಕೆ ಹೊಂದಿಕೊಂಡಂತೆ ಅಂತರಾಳದಲ್ಲಿ ನಂದಿ ಮೂರ್ತಿಯು ಶಿವಲಿಂಗಕ್ಕೆ ಅಭಿಮುಖವಾಗಿದೆ. ಗರ್ಭಗೃಹದ ಬಾಗಿಲವಾಡದ ಲಾಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಚಿತ್ರವಿದೆ. ಹೊಸ್ತಿಲಿನ ಎಡಬಲಗಳಲ್ಲಿ ಕುಂಬಗಳಿವೆ. ತೆರೆದ ಸಭಾಮಂಟಪವಿದ್ದು ನಾಲ್ಕು ಕಂಬಗಳ ಮಧ್ಯದಲ್ಲಿ ನವರಂಗವು ಎತ್ತರದಲ್ಲಿದೆ. ಅಂತರಾಳದ ಮುಂದಿನ ಎಡಬಲಗಳಲ್ಲಿ ಕೋಷ್ಟಕವನ್ನು ಹೊಂದಿದ್ದು ಶಿಲ್ಪಗಳನ್ನು ಇಡಲಾಗಿದೆ. ಹೊರಭಾಗವು ಉಪಾನದಿಂದ ಕಪೋತದವರೆಗಿನ ಅಧಿಷ್ಠಾವನ್ನು ಹೊಂದಿದೆ.

**ಊರು** – ಕವುತಾಳ **ಕಾಲ** –

**ಸ್ಮಾರಕ** – ತ್ರಯಾಂಭಕೇಶ್ವರ **ದಿಕ್ಕು** – ಪೂರ್ವಾಭಿಮುಖ

ಕವುತಾಳವು ರಾಯಚೂರಿನಿಂದ ೪೦ ಮೈಲಿ ಮತ್ತು ಲಿಂಗಸೂರಿನಿಂದ ೧೮ ಮೈಲಿ ದೂರದಲ್ಲಿರುವ ಮಧ್ಯಕಾಲೀನ ತ್ರ್ಯಯಂಬಕೇಶ್ವರ ದೇವಾಲಯವಿದೆ. ಇದರಲ್ಲಿ ಮೂರು ಶಿವಲಿಂಗವಿರುವ ಗುಡಿಗಳಮ್ಮ ಅಂತರಾಳವನ್ನು ಹೊಂದಿದೆ. ಪೂರ್ವಭಿಮುಖವಾಗಿರುವ ಬಾಗಿಲಿನ ಲಿಂಗಕ್ಕೆ ಅಭಿಮುಖವಾಗಿರುವ ನಂದಿಯಿದೆ. ಅಂತರಾಳದ ಗರ್ಭಗೃಹದ ಬಾಗಿಲ ಮೇಲೆ ಉಬ್ಬು ಚಿತ್ರದ ಗಜಲಕ್ಷ್ಮಿಯಿದೆ. ನಾಲ್ಕು ಕಂಬಗಳ ಎತ್ತರದ ನವರಂಗವಿದೆ. ಪ್ರವೇಶ ದ್ವಾರದ ಬಲಭಾಗದಲ್ಲಿ ಎರಡು ಕನ್ನಡ ಶಾಸನಗಳಿವೆ. ದೇವಾಲಯದ ಪಶ್ಚಿಮದ ಕೋಷ್ಠಕದಲ್ಲಿ ಸುಂದರವಾದ ಮಹಿಷಾಸುರ ಮರ್ದಿನಿಯ ಶಿಲ್ಪವಿದೆ.

ಈ ಮೂರು ಗುಡಿಗಳು ಒಂದೇ ಪ್ರಮಾಣದವುಗಳಾಗಿ ಶಿಖರಗಳು ದ್ರಾವಿಡ ಶೈಲಿಯಲ್ಲಿವೆ. ಇದರ ಕೆಳಗಿನ ಮೂರನೆಯ ಎರಡು ಭಾಗ ಕಲ್ಲಿನಿಂದಲೂ ಮೇಲಿನ ಭಾಗಗಳು ಇಟ್ಟಿಗೆಯ ಮತ್ತು ಸುಣ್ಣದಿಂದಲೂ ಪೂರ್ಣಗೊಳಿಸಲ್ಪಟ್ಟಿದೆ. ಕವುತಾಳಕ್ಕೆ ಉತ್ತರದಲ್ಲಿ ನಾಲ್ಕು ಮೈಲು ದೂರದ ಮುಪ್ಪುಲ ದೊಡ್ಡಿ ಎಂಬ ಗ್ರಾಮವಿದೆ. ಇಲ್ಲಿ ಪ್ರಾಚೀನ ಕಾಲದ ಚಿನ್ನ ತೆಗೆಯುವ ಉದ್ಯಮದ ಅವಶೇಷಗಳು ಕಂಡುಬಂದಿದೆ. ಶಾಸನದ ಮೊದಲ ಸಾಲುಗಳಲ್ಲಿ ಯಾದವ ಚಕ್ರವರ್ತಿ ಸಿಂಗಣನನ್ನು ಹೊಗಳುವ ಪದ್ಯಗಳಿದ್ದು ಈತನ ಕೈಕೆಳಗೆ ಬೇಚಿಸೆಟ್ಟಿಯಿದ್ದನು ಈತನು ತನ್ನ ಗುರುಗಳ ಕಾಲನ್ನು ತೊಳೆದು ತ್ರಯಂಬಕೇಶ್ವರ ದೇವಾಲಯಕ್ಕೆ ರಂಭೋಗಕ್ಕೆ ದಾನನೀಡದಂತೆ ಉಲ್ಲೇಖಿಸುತ್ತಾರೆ. (ರಾಯಚೂರು, ಜಿಲ್ಲಾ ಶಾಸನ ಸಂಪುಟ ೭ ಪುಟ ೩೩೪-೩೩೫ ದೇವರ ಕೊಂಡಾರೆಡ್ಡಿ ಸಂಪಾದ ಕತ್ವದಲ್ಲಿ ೨೦೦೩)

**ಊರು** – ಮಲ್ಲಟ **ಸ್ಮಾರಕ** – ಮಲ್ಲಿಕಾರ್ಜುನ ದೇವಾಲಯ

**ಸ್ಥಳ** – ಹಳ್ಳದ ದಂಡೆಯ ಸಮೀಪ **ದಿಕ್ಕು** – ದಕ್ಷಿಣಾಭಿಮುಖವಾಗಿದೆ

ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ತ್ರಿಕೂಟ ಮತ್ತು ಕಕ್ಷಾಸನದಲ್ಲಿದೆ. ಚೌಕಾಕಾರದ ಗರ್ಭಗೃಹದಲ್ಲಿ ಮಲ್ಲಿಕಾರ್ಜುನ ಹೆಸರಿನ ನೆಲಭಾಗದಲ್ಲಿ ಶಿವಲಿಂಗವಿದೆ. ನೀರು ಹೊರ ಹೋಗಲು ಅನುಕೂಲ ಹೊಂದಿದೆ. ಚೌಕಾಕಾರ ಅಂತರಾಳವನ್ನು ಹೊಂದಿದ್ದು ಐದು ಕೋಷ್ಟಕಗಳ ಬಾಗಿಲದ್ದು ಮತ್ತು ಐದು ಪಟ್ಟಿಕೆಗಳ ಅಲಂಕೃತವಾಗಿದ್ದು ಬಾಗಿಲವಾಡ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಚಿತ್ರವಿದೆ. ಹೊಸ್ತಿಲ ಎಡ ಬಲಗಳಲ್ಲಿ ಸ್ತ್ರೀಯರನ್ನೊಳಗೊಂಡ ದ್ವಾರ ಪಾಲಕರಿದ್ದಾರೆ ಅಂತರಾಳದ ಬಾಗಿಲು ಅಲಂಕಾರದಿಂದ ಕೊಂಡಿದ್ದು ಮುಂದೆ ನಾಲ್ಕು ಸುಳಿಯಾಕಾರದ ಎತ್ತರದ ನವರಂಗವಿದೆ. ಇದರ ಮುಂದೆ ನಂದಿ ಮೂರ್ತಿಯಿದ್ದು ಎಡಬಲಗಳಲಿ ಈಶ್ವರ ತ್ರಿಯಾಂಭಕೇಶ್ವರ ಲಿಂಗಗಳಿವೆ. ಪ್ರವೇಶದ ದ್ವಾರಬಾಗಿಲು ಜಾಲಾಂದ್ರಗಳಿಂದ ಕೂಡಿದೆ. ಒಳಪ್ರವೇಶದ ಎಡ ಬಲಗಳಲ್ಲಿ ಕೂಡಲು ಜಾಗವಿದೆ. ಎರಡು ಕಂಬಗಳ ಪೀಠಭಾಗ ಚೌಕಾಕಾರವಾಗಿದ್ದು ಅಷ್ಟಾದಿಕ್‌ಪಾಲಕರಿದ್ದುಯ ಮೇಲೆ ಸುರಳಿಯಾಕಾರದ ಬೋಧಿಗೆಗಳನ್ನು ಹೊಂದಿದೆ. ದೇವಾಲಯದ ಲಿಂಗವು ಪೂರ್ವಕ್ಕೆ ಮುಖ ಹೊಂದಿದ್ದು ಅದಕ್ಕೆ ಎದುರಾಗಿ ನಂದಿ ಮತ್ತು ತ್ರಯಾಂಭಕೇಶ್ವರ ಈಶ್ವರ ಚಿಕ್ಕ ಗುಡಿಗಳಿವೆ ಇವುಗಳ ಮಧ್ಯದಲ್ಲಿ ದ್ವಾರ ಬಾಗಿಲಿನ ನೇರಕ್ಕೆ ದಕ್ಷಿಣಕ್ಕೆ ಮುಖಮಾಡಿ ಈಶ್ವರ ಲಿಂಗವಿದ್ದು ಮೂರ್ತಿ ಶಿಲ್ಪಗಳಿವೆ. ಹೊರಭಾಗದ ದ್ವಾರ ಬಾಗಿಲ ಪಕ್ಕದಲ್ಲಿ ಆನೆಗಳ ಸಾಲು ಇದ್ದು ಮುಂದೆ ಬಲ ಭಾಗದಲ್ಲಿ ಹನುಮಂತನ ಮೂರ್ತಿ ಶಿಲ್ಪವನ್ನು ಹೊಂದಿವೆ. ಅಧಿಷ್ಠಾನ, ಭಿತ್ತಿ ಮೂರು ಗೋಪುರಗಳನ್ನು ಹೊಂದಿದ ತ್ರಿಕೂಟದೇವಾಲವಾಗಿದೆ. ಈ ದೇವಾಲಯದ ಎಡಗಡೆ ಬಾವಿಯಿದ್ದು ವಿಶಾಲವಾದ ಹೊರ ಆವರಣವನ್ನು ಹೊಂದಿದೆ. ಪ್ರವೇಶ ದ್ವಾರದ ಎಡಭಾಗದಲ್ಲಿ ಸ್ವಲ್ಪ ದೂರದಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದಂತೆ ಕಾಣುವ ಚಿಕ್ಕದಾದ ದೇವಾಲಯವಿದ್ದು ಸುತ್ತಲು ಆನೆಯ ಸಾಲನ್ನು ಹೊಂದಿದ್ದು ಗರ್ಭಗುಡಿಯಿದ್ದು ಮೂರ್ತಿಯು ಹಾಳಾಗಿದೆ. ಇದೇ ಊರಿನ ಆದೇ ಹೊಲದಲ್ಲಿ ಅಲ್ಲಮ ದೇವಾಲಯದ ನವರಂಗ ಮಂಟಪದ ದಕ್ಷಿಣಕ್ಕೆ ಎದುರಾದ ಒಳ ಗೋಡೆಯಲ್ಲಿ ಒಂದು ಶಾಸನವಿದೆ.

## ೩.೨. ಮೂರ್ತಿ ಶಿಲ್ಪಗಳು

ಭಾರತೀಯ ಮೂರ್ತಿ ಶಿಲ್ಪದ ಪರಿಕಲ್ಪನೆಯ ಹೊಸ ಅಧ್ಯಾಯ ಪ್ರಾರಂಭವಾದುದು ಮೌರ್ಯರ ಕಾಲದಲ್ಲಿ ಕಲ್ಲಿನ ಸ್ತಂಭಗಳ ಮೇಲ್ಭಾಗದಲ್ಲಿ ಆನೆ, ಸಿಂಹ, ಕುದುರೆಯ ಆಕೃತಿಗಳು ಮುಖ್ಯವಾಗಿ ಕಂಡು ಬರುತ್ತವೆ. ಬೌದ್ಧ, ಜೈನ ಧರ್ಮಗಳ ಪ್ರಾರಂಭಿಕ ರೂಪಕ್ಕೂ ಮಧ್ಯಕಾಲೀನ ಯುಗದಲ್ಲಿನ ಅವುಗಳ ಆಚರಣೆಯ ರೂಪಕ್ಕೂ ಸಾಕಷ್ಟು ವ್ಯತ್ಯಾಸವಿದೆ. ಜೈನ ಧರ್ಮದಲ್ಲಿ ತೀರ್ಥಂಕರರನ್ನು ಮೂರ್ತಿರೂಪದಲ್ಲಿ ಪೂಜಿಸುವ ಸಂಪ್ರದಾಯ ಕ್ರಿ.ಶ. ಆರಂಭದಲ್ಲಿ ಇದ್ದುದಕ್ಕೆ ಪ್ರಾಕ್ತನ ಶಾಸ್ತ್ರೀಯ ಆಧಾರಗಳು ದೊರಕುತ್ತವೆ.

ಕರ್ನಾಟಕದಲ್ಲಿ ಮೂರ್ತಿಶಿಲ್ಪ ಕಲೆಯು ಅಪರಿಮಿತವಾಗಿ ಬೆಳೆದು ವಿಶಿಷ್ಟ ಸ್ಥಾನ ಪಡೆದುಕೊಂಡಿದ್ದು ರಾಜ ಮಹಾರಾಜರ ಕಾಲದಲ್ಲಿ. ವಿವಿಧ ರಾಜ ವಂಶದವರು ತಮ್ಮದೇ ಆದ ವಿಶೇಷ ಶೈಲಿ ಮತ್ತು ಅಲಂಕಾರಿಕ ಲಕ್ಷಣಗಳನ್ನ ಹೊಂದಿದ್ದು ವೈಶಿಷ್ಟ್ಯತೆಯ ಜೊತೆಗೆ ಸೌಂದರ್ಯ ಪ್ರಜ್ಞೆಯನ್ನು ಉಳಿಸಿ ಬೆಳೆಸಿಕೊಂಡಿರುವುದು ಭಾರತೀಯ ಮೂರ್ತಿ ಶಾಸ್ತ್ರದಲ್ಲಿ ಗಮನಾರ್ಹವಾಗಿದೆ.

ಆರಂಭ ಕಾಲದಿಂದಲೂ ಮನುಷ್ಯ ಶಿಲೆಯೊಡನೆ ನಿಕಟ ಸಂಬಂಧ ಹೊಂದಿದ್ದು ಬಹಳ ಹಿಂದಿನ ಕಾಲದಿಂದಲೂ ಶಿಲೆಯಿಂದ ಮೂರ್ತಿಗಳ ನಿರ್ಮಾಣ ಕಾರ್ಯಕೈಗೊಳ್ಳತ್ತಾ ಬಂದಿದ್ದಾನೆ. ಮತ್ಸ್ಯಾಪುರಾಣ ಕಲ್ಲಿನ ಮೂರ್ತಿ ತಯಾರಿಕೆಯ ಬಗ್ಗೆ ನಿರ್ದೇಶಿಸಿದೆ. ಶಿಲೆಗಳಲ್ಲಿ ಪುರುಷ ಶಿಲೆ, ಸ್ತ್ರೀಶಿಲೆ, ನಪುಂಸಕ ಶಿಲೆಗಳಿದ್ದು ಕ್ರಮವಾಗಿ ಮುಖ್ಯ ಮೂರ್ತಿ ಪೀಠ ಪಿಂಡಿಕ ಅಥವಾ ಕೆಳಭಾಗದ ರಚನೆಗೆ ಬಳಸಬೇಕೆಂದು ತಿಳಿಸಲಾಗಿದೆ. ಶಿಲೆಗಳಲ್ಲಿ ಯುವ, ಮಧ್ಯ, ಬಾಲ, ಹಾಗೂ ವೃದ್ಧವೆಂಬ ಬಗೆಗಳಿದ್ದು ಮೊದಲಿನ ಎರಡು ಪ್ರಕಾರಗಳು ಮೂರ್ತಿರಚನೆಗೆ ಯೋಗ್ಯವಾದವುಗಳು.

ವಿಷ್ಣು ಧರ್ಮೋತ್ತರ ಪುರಾಣ ಶಿಲಾಮೂರ್ತಿಗಳನ್ನು ತಯಾರಿಸುವ ಕುರಿತು ವಿವರಣೆ ನೀಡುತ್ತವೆ. ಇದರ ಹತ್ತೊಂಭತ್ತನೆಯ ಅಧ್ಯಾಯದಲ್ಲಿ ಶಿಲಾಪರೀಕ್ಷೆಗೆ ಮೀಸಲಾಗಿದೆ ಇದರಲ್ಲಿ ಬಿಳಿ, ಕೆಂಪು, ಹಳದಿ ಮತ್ತು ಕಪ್ಪು ಕಲ್ಲುಗಳನ್ನು ಕ್ರಮವಾಗಿ ಬ್ರಾಹ್ಮಣ ಕ್ಷತ್ರೀಯ ವೈಶ್ಯ ಮತ್ತು ಶೂದ್ರರು ಆರಾಧಿಸುವ ಮೂರ್ತಿ ರಚನೆಗೆ ಬಳಸಬೇಕೆಂದು ಹಾಗೂ ಕಲ್ಲುಗಳ ಸರಿಯಾದ ಉದ್ದ ಅಗಲ ಮತ್ತು ದಪ್ಪವನ್ನು ಹೊಂದಿರಬೇಕೆಂದು ಹೇಳುತ್ತದೆ.[೧]

ಈ ಭಾಗದಲ್ಲಿ ದೊರೆತಿರುವ ಕೆಲವು ಮೂರ್ತಿಶೀಲ್ಪ ಅಥವಾ ಶಿಲಾಮೂರ್ತಿಗಳಲ್ಲಿ ಶೈವ ಮೂರ್ತಿಗಳು ವೈಷ್ಣವ ಜಿನ ಪಂಥಿಯ ಮೂರ್ತಿಗಳು ಸ್ಮಾರಕ ಶಿಲೆಯ ಮೇಲಿನ ಮೂರ್ತಿಗಳು ಕಂಡು ಬರುತ್ತವೆ.

ಭಾರತೀಯ ಶೀಲ್ಪ ಬೆಳವಣಿಗೆಯೆಂದರೆ ಧರ್ಮದಿಂದ ಪ್ರಭಾವಿತವಾದ ಮೂರ್ತಿ ಶಿಲ್ಪದ ಬೆಳವಣಿಗೆ ಎಂದೇ ಹೇಳಬೇಕಾಗುತ್ತದೆ.

ಮಾನ್ವಿ ತಾಲೂಕಿನಲ್ಲಿ ದೊರೆತ ಶೈವ ಮೂರ್ತಿಗಳಿಗೆ ಸಂಬಂಧಿಸಿದಂತೆ ಶಿವಲಿಂಗ ಹೊರತಾಗಿರುವ ಸ್ಥಾನೀಕ ಅನೇಕ ಮೂರ್ತಿಗಳು ಇಲ್ಲಿ ಪ್ರಧಾನವಾಗಿವೆ. ಶಿವನ ಪ್ರತಿರೂಪವೆಂದು ಭಾವಿಸಲಾಗಿರುವ ಲಿಂಗ ಹಾಗೂ ಆತನ ವಾಹನವಾದ ನಂದಿ(ವೃಷಭ) ಪ್ರತಿಯೊಂದು ಶೈವ ದೇವಾಲಯದಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. ಹಾಗೆ ಉಮಮಹೇಶ್ವರ ಶೈವದ್ವಾರಪಾಲಕ ಬೈರವ ವೀರಭದ್ರ ಗಣೇಶ ಮೂರ್ತಿಗಳು ಕಂಡು ಬರುತ್ತವೆ. ಅವುಗಳಲ್ಲಿ ಪ್ರಮುಖ ಮೂರ್ತಿಗಳನ್ನು ಪ್ರತ್ಯೇಕವಾಗಿ ಈ ಅಧ್ಯಯನ ಮಾಡಿ ಕೆಳಗಿನಂತೆ ವಿವರಿಸಲಾಗಿದೆ.

## ಶಿವಲಿಂಗ

ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸುವುದು ಸಾರ್ವಸಾಮಾನ್ಯ. ಈ ತಾಲೂಕಿನಲ್ಲಿ ಹೆಚ್ಚಿನ ಮೆಟ್ಟಿಗೆ ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸಲಾಗುತ್ತಿದೆ. ಇದರಲ್ಲಿ ಚಲ ಮತ್ತು ಅಚಲ ಎಂಬ ಎರಡು ವಿಧಗಳಿದ್ದು ಚಲ ಲಿಂಗದಲ್ಲಿ ಒಂಬತ್ತು ನಮೂನೆಯ ಲಿಂಗಗಳಿವೆ ಅವು ಸ್ವಯಂಭವ, ಪುರವ, ದೈವತ, ಗಾಣಪತ್ಯ, ಅಸುರ, ಸುರ, ರಾಕ್ಷಸ, ಮಾನುಸ, ಬಾಣ ಲಿಂಗಗಳಾಗಿವೆ. ಅಚಲ ಲಿಂಗದಲ್ಲಿ ೩ ಭಾಗಗಳಿದ್ದು ಕೆಳಭಾಗದಲ್ಲಿ ಬ್ರಹ್ಮನನ್ನು ಪ್ರತಿನಿಧಿಸುವ ಅಷ್ಟಕೋನಾಕಾರದ ವಿಷ್ಣು ಭಾಗವಿರುತ್ತದೆ. ಇವೆರಡು ಭಾಗಗಳು ಸಹ ಪಾಣಿ ಪೀಠದಲ್ಲಿ ಸೇರುತ್ತದೆ. ರುದ್ರಭಾಗವು ಕೊಳವೆ ಆಕೃತಿಯಲ್ಲಿದ್ದು ಪಾಣಿ ಪೀಠದ ಮೇಲಿನ ಈ ಭಾಗವು ಪೂಜೆಗೊಳಪಡುತ್ತವೆ.[2]

ಶಿವಲಿಂಗ ಮೊಟ್ಟೆಯಾಕಾರದ ಅರ್ಧಚಂದ್ರಕೃತಿಯ ವೃತ್ತಾಕಾರದ ಹಾಗೆ ಬಾಣಕಾರದ ಲಿಂಗಗಳು ಈ ತಾಲೂಕಿನ ವಿವಿಧ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಮುಖ ರೂಪದ ಲಿಂಗಗಳು ಅಲ್ಲಲಿ ಕಂಡುಬರುತ್ತವೆ. ಹಾಗೆಯೇ ಪೀಠದಲ್ಲಿ ವೃತ್ತಾಕಾರವದ, ಚೌಕಾಕಾರದ, ಆಯಾತಾಕಾರದ, ಪೀಠಗಳು ಕೂಡ ಕಾಣಸಿಗುತ್ತವೆ. ಬಾಗಲವಾಡ, ಕವುತಾಳ, ಕಲ್ಲೂರು, ಕುರುಡಿ, ಕಪ್ಪಗಲ್ ಮಲ್ಲಟ, ಬಲ್ಲಟಗಿ, ಆತನೂರು, ಸುಂಕೇಶ್ವರ, ಹರವಿಗಳಲ್ಲಿ ದೊರಕುತ್ತವೆ. ಇಲ್ಲಿ ಬಳಕೆಯಾಗಿರುವ ಶಿಲೆಗಲು ಬಳಪದ ಮತ್ತು ಕಪ್ಪು ಶಿಲೆಗಳಲ್ಲಿ ಹೆಚ್ಚಾಗಿ ಕಪ್ಪು ಶಿಲೆಗಳು ಕಂಡುಬರುತ್ತವೆ.

## ನಂದಿ

ಈ ಭಾಗದ ಶೈವ ದೇವಾಲಯಗಳಲ್ಲಿ ಶಿವನ ವಾಹನವಾದ ನಂದಿಯನ್ನು ಅಂತರಾಳದಲ್ಲಿಯಾಗಲಿ ಇಲ್ಲವೆ ನವರಂಗದಲ್ಲಾಗಲಿ ಮೂರ್ತಿಗಳಿರುತ್ತವೆ. ಕೆಲವು ಕಡೆ ಪ್ರತ್ಯೇಕ ನಂದಿ ಗುಡಿಯನ್ನು ಕಟ್ಟಿರುತ್ತಾರೆ. ಇದಕ್ಕೆ ಉದಾಹರಣೆ ಎಂದರೆ, ಆತ್ತನೂರು ಎನ್ನುವ ಗ್ರಾಮದಲ್ಲಿರುವ ದಿಡ್ಡಿ ಬಸವಣ್ಣ ಕೆಲವು ನಂದಿಗಳು ಅಲಂಕಾರಿವಾಗಿದ್ದರೆ ಇನ್ನು ಕೆಲವು ಅಲಂಕಾರ ರಹಿತವಾಗಿರುತ್ತವೆ. ಹರವಿ ಬಸವಣ್ಣ ದೇವಾಲಯದಲ್ಲಿ (ಇದಕ್ಕೆ ಮಲ್ಲಿಕಾರ್ಜುನ ದೇವಾಲಯವೆಂದು ಕೂಡಾ ಕರೆಯುತ್ತಾರೆ.) ನಂದಿಯು ಪೂರ್ವಭಾಗದಲ್ಲಿದ್ದು ದಕ್ಷಿಣಕ್ಕೆ ಈಶ್ವರನ ಎದುರಿನಲ್ಲಿದ್ದಾನೆ.

ಸುಮಾರು ೭ ಅಡಿ ಎತ್ತರದಲ್ಲಿದ್ದಾನೆ. ಪೂರ್ವ ಬಾಗಿಲಿನಿಂದ ನೋಡಿದರೆ ಬಸವಣ್ಣ ಮೊದಲು ನಂತರ ಈಶ್ವರ ಕಾಣಿಸುತ್ತಾನೆ. ಜನರು ನಂದಿಯನ್ನು ತುಳಿದುಕೊಂಡು ಹೋಗುತ್ತಾರೆ ಎಂಬ ಕಾರಣಕ್ಕಾಗಿ ಈ ಬಾಗಿಲನ್ನು ಮುಚ್ಚಲಾಗಿದ್ದು ಉತ್ತರ ದಿಕ್ಕಿನ ಬಾಗಿಲನ್ನು ತೆರೆಯಲಾಗಿದೆ. ಉತ್ತರ ದಿಕ್ಕಿನಿಂದ ನೋಡಿದರೆ ವೀರಭದ್ರೇಶ್ವರ ಕಾಣುವನು. ಆತನ ಎಡಭಾಗದಲ್ಲಿ ಈಶ್ವರ ಮತ್ತು ನಿಲಾಂಬಿಕೆ ಬಲಭಾಗದಲ್ಲಿ ಬಸವಣ್ಣನ ಮೂರ್ತಿ (ನಂದಿ) ಇದೆ. ನಿಲಾಂಬಿಕೆ ಬಸವಣ್ಣನ ಎಡಭಾಗಕ್ಕೆ ಇದ್ದಾಳೆ. ಇದು ಇಲ್ಲಿಯ ವಿಶೇಷತೆ ಎಂದು ಹೇಳಬಹುದು. ಇದರ ಎರಡು ಕೊಡುಗಳ ಮೂಲಕ ಸೂರ್ಯನ ಕಿರಣಗಳು ಈಶ್ವರನ ಮೇಲೆ ಹಾಯುತ್ತವೆ. ಕೊರಳೊಳಗೆ ಗೆಜ್ಜೆ ಸರವಿದ್ದು ಹಣೆಪಟ್ಟಿಯನ್ನು ಹೊಂದಿದ್ದಾನೆ. ೬ಅಡಿ ಉದ್ದ ೩ ಅಡಿ ಅಗಲವನ್ನು ಹೊಂದಿದೆ. ಭುಜವು ಎತ್ತರದಲ್ಲಿ ಅಗಲವಾದ ಕಿವಿಗಳು ಮುಂದಿನ ಎಡಗಾಲನ್ನು ಮುಂದೆ ಚಾಚಿ ಬಲಗಾಲನ್ನು ಮಡಚಲಾಗಿದೆ. ಬಾಲವನ್ನು ಎಡಭಾಗದಲ್ಲಿ

ಉದ್ದವಾಗಿ ಮಡಚಲಾಗಿದೆ. ಅದೇ ರೀತಿ ಅತ್ತನೂರಿನ ದಿಡ್ಡಿ ಬಸವಣ್ಣನು ಇದ್ದಾನೆ. ಭುಜದ ಮೈಮೇಲೆ ಅಲಂಕಾರದ ಹೊದಿಕೆಯನ್ನು ಹೊದಿಸಲಾಗಿದೆ. ಜಾಗಟಗಲ್ಲು ಮಾಡಗಿರಿ ಅತ್ತನೂರುಗಳಲ್ಲಿರುವ (ನಂದಿ) ಬಸವಣ್ಣನವರು ಮೂರುಜನ ಅಣ್ಣ ತಮ್ಮಂದಿರು ಎಂದು ಹೇಳಲಾಗಿದೆ.

ಕುರುಡಿ ಗ್ರಾಮದ ಜಗಲಿಯ ಮೇಲೆ ಕಟ್ಟಲಾದ ಈಶ್ವರನ ಎದುರಿನಲ್ಲಿ ನಂದಿ ಮೂರ್ತಿಯು ಸುಮಾರು ೫ ಅಡಿ ಉದ್ದ ೩ವರೆ ಅಡಿ ಅಗಲವಾದ ಸ್ಥಾನದಲ್ಲಿ ೩ ಅಡಿ ಎತ್ತರವಿರುವ ಈ ಮೂರ್ತಿಯ ಕೊರಳೊಳಗೆ ಗಂಟೆಸರ, ಹಣೆಪಟ್ಟಿ, ಇದೆ ಎತ್ತರದ ಭುಜವಿದ್ದು ಮೇಲೆ ಸುಂದರವಾದ ಹೊದಿಕೆಯನ್ನು ಹೊದಿಸಲಾಗಿದೆ. ಬಾಗಲವಾಡದ ನಲಭವರ ಅಂದರೆ, ನೆಲದಡಿಯಲ್ಲಿ ರಾಮಲಿಂಗೇಶ್ವರ ದೇವಾಲಯ ನೋಡಲು ಬಿದ್ದುಹೋದ ಮನೆ ಜಾಗ ಎನ್ನುವಂತೆ ಕಾಣಿಸುತ್ತದೆ. ಅದರ ಹತ್ತಿರ ಕಾಲು ದಾರಿಯಿದೆ. ಆ ದಾರಿಯ ಪಕ್ಕದಲ್ಲಿ ಕಟ್ಟೆಯಂತಿರುವ ಇದಕ್ಕೆ ಒಬ್ಬರೆ ಇಳಿದು ಹೋಗಲು ಕಿರಿದಾಗಿ ಮೆಟ್ಟಿಲುಗಳಿರುವ ದಾರಿಯಿದೆ. ಮೂರು ಗರ್ಭಗೃಹಳಿವೆ. ಒಂದರಲ್ಲಿ ಎತ್ತರದ ಪೀಠದ ಮೇಲೆ ಪಶ್ಚಿಮಕ್ಕೆ ಮುಖಮಾಡಿರುವ ನಂದಿ ಮೂರ್ತಿಯಿದೆ ಇದರ ಮುಂದೆ ದಕ್ಷಿಣಕ್ಕೆ ಮುಖಮಾಡಿರುವ ಕೊಳವೆಯಾಕಾರದ ಶಿವಲಿಂಗವಿದೆ. ಉಳಿದ ಎರಡು ಗರ್ಭಗೃಹದಲ್ಲಿ ಮೂರ್ತಿಗಳಿಲ್ಲ ಅಲ್ಲಿನವರ ಪ್ರಕಾರ ಉತ್ತರ ಮತ್ತು ದಕ್ಷಿಣದ ಭಾಗಗಳಲ್ಲಿ ಎರಡು ಭಾವಿಗಳಿದ್ದು ಈ ಅದನ್ನು ಮುಚ್ಚಲಾಗಿದೆ. ಈಗ ಗುಡಿಯ ಮುಂದೆ ನೆಲವನ್ನು ಅಗೆದಾಗ ಈಶ್ವರ ಲಿಂಗವಿರುವುದು ಪತ್ತೆಯಾಗಿದ್ದು ಈಗ ಅದರ ಮೇಲೆ ಮನೆಯನ್ನು ಕಟ್ಟಲಾಗಿದೆ. ಎಂದು ಊರಿನ ಹಿರಿಯರು ಹೇಳುತ್ತಾರೆ. ಈಗಲು ಈ ಗುಡಿ ಶಿಥಲಾವ್ಯವಸ್ಥೆಯಲ್ಲಿದೆ. ಇದರ ಉತ್ತರ ದಿಕ್ಕಿಗೆ ಮೇಲ್ಭಾಗದಲ್ಲಿ ವೀರಭದ್ರ ದೇವಾಲಯವಿದೆ.

**ಉಮಾಮಹೇಶ್ವರ ಮೂರ್ತಿ**

ಕಪ್ಪಗಲ್ಲಿನ ಶಾಸನವಿರುವ ಬಾವಿಯಲ್ಲಿ ಉಮಾಮಹೇಶ್ವರನ ಶಿಲ್ಪವಿದೆ. ಮೇಲ್ಭಾಗದಲ್ಲಿ ಕಾರ್ತಿಕೇಯ ಮತ್ತು ಆತನ ವಾಹನ ನವಿಲು ಇದ್ದು ಕೈಯಲ್ಲಿ ಕೋಲನ್ನು ನೆಲಕ್ಕೆ ಊರಿನಿಂತಿರುವ ನಿಂತಿರುವ ಭಂಗಿಯಲ್ಲಿದ್ದು ಉಮಾ ಶಿವನ ಎಡತೊಡೆಯ ಮೇಲೆ ಕುಳಿತಿರುತ್ತಾಳೆ. ಇಂತಹ ಮೂರ್ತಿಗಳು ಬೆರಳೆಣಿಕೆಯಷ್ಟು ಈ ಭಾಗದಲ್ಲಿ ಕಂಡುಬರುತ್ತವೆ.

ಶಿವನ ಎಡತೊಡೆಯ ಮೇಲೆ ಕುಳಿತಿರುವ ಉಮೆಯು ದಾಂಪತ್ಯಾಸನದಲ್ಲಿ ಕುಳಿತಿದ್ದು ದುಂಡಾಕಾರವಾಗಿ ಅಲಂಕರಿಸಿದ ತಲೆಗೂದಲೂ ಅದು ಹಿಂಭಾಗದಲ್ಲಿ ಕಲಾತ್ಮಕ ಶಿರಶ್ಚಕ್ರ ಪಟ್ಟಿಇದೆ. ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ ಕಂಠಾಭರಣ, ಕೊರಳಹಾರ, ಬುಜಕೀರ್ತಿ, ಕೇಯಾರು ಕೈಕಡಗ ಬಲಗೈಯಿಂದ ಶಿವನ ಬೆನ್ನ ಹಿಂಭಾಗವನ್ನು ಬಳಸಿಕೊಂಡಿದ್ದಾಳೆ. ಕಾಲಲ್ಲಿ ಕಾಲುಕಡಗವ್ವ, ಕೆಳಭಾಗದಲ್ಲಿ ಸಿಂಹವಿದೆ.

ಕೀರಿಟಧಾರಿಯಾದ ಮಹೇಶ್ವರ ಚತುರ್ಭುಜ ಧಾರಿಯಾಗಿದ್ದು ದಾಂಪತ್ಯಸನದಲ್ಲಿ ಕುಳಿತಿದ್ದಾನೆ. ಕೀರಿಟದ ಹಿಂಭಾಗಕ್ಕೆ ಶಿರಶ್ಚಕ್ರವಿದ್ದು ಮಂದಹಾಸ ಬಿರುತ್ತಿರುವ ಮುಖ ಕಿವಿಯಲ್ಲಿ ಸರ್ಪಕುಂಡಲ, ಕೊರಳಲ್ಲಿ ಅನೇಕ ಬಗೆಯ ಹಾರಗಳು ಭುಜಕೀರ್ತಿಯ ಕೇಯಾರು ಕೈಗಡಗ ಎಡಗೈ ಒಂದರಲ್ಲಿ

ತ್ರಿಶೂಲವಿದ್ದು, ಇನ್ನೊಂದು ಕೈಯನ್ನು ಉಮಯ ಭುಜವನ್ನು ಅಲಂಗಿಸಿದಂತೆದೆ. ಬಲಗೈಯನ್ನು ಎತ್ತಿ ಆಶಿರ್ವಾದಿಸುವುವ ರೀತಿಯಲ್ಲಿದ. ಇನ್ನೊಂದು ಕೈ ಸ್ಪಷ್ಟವಾಗಿಲ್ಲ. ವೃತ್ತಾಕಾರದ ಮುಖ ನಿಳವಾದ ಮೂಗು ಎದ್ದು ಕಾಣುವ ಹುಬ್ಬು, ಉಬ್ಬಿದಗಲ್ಲ ಹಾಗು ತುಟಿಗಳು ಸೌಮ್ಯ ಸ್ವಭಾವವನ್ನು ಪ್ರತಿಬಿಂಬಿಸುವ ಈ ಮೂರ್ತಿಯ ಮುಂದಿನ ಬಾಗಿಲ ಮೇಲೆ ಗಜ ಲಕ್ಷ್ಮಿಯ ಉಬ್ಬು ಚಿತ್ರವಿದ್ದು ಶಿಲ್ಪಗಳು ಕೆಳಭಾಗದಲ್ಲಿ ಎರಡು ಕಡೆ ಕುಂಭಗಳಿವೆ. ಇದು ಚಾಲುಕ್ಯರ ಕಾಲದ್ದಾಗಿದೆ. ಅದೇ ರೀತಿಯಾಗಿ ಮಲ್ಲಟದ ಮಲ್ಲಿಕಾರ್ಜುನ ದೇವಾಲಯದ ಒಳಭಾಗದಲ್ಲಿ ಪೂರ್ವದ ಗೋಡೆಯಲ್ಲಿ ನಂದಿಯ ಹಿಂಭಾಗದಲ್ಲಿ ಪೀಠದ ಮೇಲೆ ಶೀವಪಾವರ್ತಿಯರ ಮೂರ್ತಿ ಶಿಲ್ಪವಿದೆ.

## ವೀರಭದ್ರ

ಹರವಿ ಬಸಣ್ಣ ದೇವಾಲಯದಲ್ಲಿ ಇರುವ ತ್ರಿಮೂರ್ತಿಗಳಲ್ಲಿ ವೀರಭದ್ರನ ಮೂರ್ತಿಯೊಂದು. ಪೀಠದ ಮೇಲೆ ಸ್ಥಾನಿಕವಾಗಿರು ಈ ಮೂರ್ತಿಯು ಕೀರಟಾಧಾರಿಯಾಗಿದ್ದು ಚತುರ್ಭುಜ ಚತುರ್ಭುಜಧಾರಿಯಾಗಿದೆ. ಕೊರಳಹಾರ ಕಿವಿಯೊಲೆ, ಉದುರಬಂಧ, ಕೈಕಡಗ ಎಡಗೈಯಲ್ಲಿ ಜಿಲ್ಲನ್ನು ಮತ್ತು ಇನ್ನೊಂದು ಕೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ತ್ರಿಶೂಲ ಖೇಟಕವನ್ನು ಹಿಡಿದಿದ್ದಾನೆ. ಕೈಗಡಗ ಮತ್ತು ಕಾಲುಗಡಗದಿಂದ ಅಲಂಕೃತವಾದ ಮಿತವಾದ ಅಲಂಕಾರ ನೆರಿಗೆಯುಕ್ತ ವಸ್ತ್ರಗಳು ಮುಖಭಾವ ಬಳಸಿರುವ ಮೂರ್ತಿ ಇದ್ದು, ಅದೇರೀತಿಯಾಗಿ ಬಾಗಲವಾಡದ ನೆಲಭವರ ರಾಮಲಿಂಗೇಶ್ವರ ದೇವಾಲಯದ ಮೇಲ್ಭಾಗದಲ್ಲಿ ವೀರಭದ್ರೇಶ್ವರನ ಮೂರ್ತಿಯನ್ನೊಳಗೊಂಡ ದೇವಾಲಯವಿದೆ. ಅದರ ದ್ವಾರ ಬಾಗಿಲು ಚಿಕ್ಕದಾಗಿದೆ. ಕವುತಾಳದ ತ್ರಯಿಂಭಕೇಶ್ವರ ದೇವಾಲಯದ ಪಕ್ಕದಲ್ಲಿ ಇಂತಹದ್ದೆ ಮೂರ್ತಿಯನ್ನು ಕಾಣಬಹುದಾಗಿದೆ.

## ಗಣಪತಿ

ಈ ತಾಲೂಕಿನಲ್ಲಿ ಅರಸರ ಕಾಲಕ್ಕೆ ಸಂಬಂಧಿಸಿದ ಹಲವಾರು ಗಣಪತಿಯ ಮೂರ್ತಿಗಳು ವಿವಿಧೆಡೆಯಲ್ಲಿ ದೊರೆತಿದ್ದು ಇವುಗಳಲ್ಲಿ ದ್ವಿಭುಜ ಹೊಂದಿರುವ ಮೂರ್ತಿಗಳ ವಿಗ್ರಹಗಳಿವೆ.

ಬಾಗಲವಾಡ ಕುರುಡಿ ಕವುತಾಳ ಕಪ್ಪಗಲ್ ಹರವಿ ಅತ್ತನೂರು ಬಲ್ಲಟಗಿ ದೇವಾಲಯಗಳ ಒಳಗೆ ಮತ್ತು ಹೊರ ಭಾಗಗಳಲ್ಲಿ ಕಂಡುಬರುವ ವಿಗ್ರಹಗಳಿದ್ದು ಬಹಳಷ್ಟು ಹಾಳಾಗಿರುವುದು ಕಂಡುಬರುತ್ತವೆ. ಈ ಮೂರ್ತಿಗಳ ಎರಡು ಕೈಗಳಲ್ಲಿ ಅಂಕುಶ ಪಾಶ ಕೆಳಗಿನ ಕೈಗಳಲ್ಲಿ ಭಗ್ನದಂತ ಮೋದಕಪಾತ್ರೆ ಹಿಡಿದಿದ್ದು ಮೊದಕ ಪಾತ್ರೆಯ ಮೇಲೆ ಸೊಂಡಿಲಿದ್ದು, ಕೈಗಡಗ ಕೀರಿಟಧಾರಿಯಾದ ಈ ಮೂರ್ತಿಗಳು ಕಾಲ್ಗಡವನ್ನು ಧರಿಸಿವೆ. ಕೊರಳೊಳಗೆ ಆಭರಣಗಳಿವೆ. ಪಾದದ ಮೇಲೆ ಪಾದಸರಗಳಿವೆ. ಮೂರ್ತಿಗಳ ಬಲಗಡೆ ವಿನಾಯಕನ ವಾಹನ ಮೋಶಕನು ಇದ್ದದ್ದು ಕಂಡು ಬರುತ್ತದೆ. ಉದರಕ್ಕೆಸುತ್ತಿರುವ ಸರ್ಪ ಪ್ರತಿಯೊಂದು ಮೂರ್ತಿಗಳಲ್ಲಿ ಕಾಣತ್ತೇವೆ. ಇವು ಬಾಗಲವಾಡದ ಬನ್ನಿ ಮರದ ಕೆಳಗೆ ದೊಡ್ಡ ಗಾತ್ರದ ಭಗ್ನಗೊಂಡಿರುವ ಮೂರ್ತಿಯಿದ್ದು ಕುರುಡಿಯ ರಾಮಲಿಂಗೇಶ್ವರ ಗುಡಿಯ ಸಮೀಪ

ತಗ್ಗಾದ ಮತ್ತು ಭೂಮಿಯಲ್ಲಿ ಅರ್ಧಭಾಗ ಮುಚ್ಚಿ ಹೋಗಿರುವ ದೇವಾಲಯದಲ್ಲಿ ಗಣೇಶನ ಮೂರ್ತಿಯನ್ನು ಕಾಣಬಹುದು ಅಲ್ಲಿ ಇದಾದ ನಂತರ ಇನ್ನು ಸ್ವಲ್ಪ ದೂರದಲ್ಲಿ ಮತ್ತೊಂದು ದೇವಾಲಯವಿದೆ. ಶಿವಲಿಂಗವಿರಬೇಕಾದ ಸ್ಥಳದಲ್ಲಿ ಸ್ವಲ್ಪ ಭಗ್ನಗೊಂಡಿರುವ ಗಣಪತಿ ಮೂರ್ತಿಯನ್ನು ಇಡಲಾಗಿದೆ. ಕಪ್ಪಗಲ್ ಗ್ರಾಮದ ರಾಮಲಿಂಗೇಶ್ವರ ಗುಡಿಯ ಒಳಭಾಗದಲ್ಲಿ ಎಲ್ಲೊಇದ್ದಂಥ ಈ ಮೂರ್ತಿಯನ್ನು ಒಳಭಾಗದ ಗೋಡೆಗೆ ಬರಗಿಸಿದ್ದಾರೆ. ಬಾಗಲವಾಡದ ಬನ್ನಿ ಮರದ ಕೆಳಗೆ ಮತ್ತು ನೆಲಭವರ ರಾಮಲಿಂಗೇಶ್ವರ (ಈ ಗುಡಿಯು ನೆಲಭಾಗದಿಂದ ಸ್ವಲ್ಪ ಎತ್ತರದಲ್ಲಿ ನೋಡಿದರೆ ಇದು ಮನೆ ಬಿದ್ದ ಜಾಗದಂತಿದೆ ಇದು ಒಳಗೆ ಹೋಗಲು ಕಿರಿದಾದ ಜಾಗವಿದೆ. ಇದು ಮನೆಯ ಗಾತ್ರದ ಒಳಗಡೆ ಮೆಟ್ಟಿಲುಗಳ ಮೂಲಕ ಇಳಿಯಲು ಅನುಕೂಲವಿದೆ. ದಕ್ಷಿಣಕ್ಕೆ ಮುಖಮಾಡಿ ಇಡಲಾದ ಭಗ್ನಗೊಂಡಿರುವ ಗಣಪತಿ ಮೂರ್ತಿಯಾಗಿದೆ. ಹಾಗೆ ಕವುತಾಳದ ತ್ರಯಂಭಕೇಶ್ವರ ದೇವಾಲಯ ಒಳಭಾಗದಲ್ಲಿ ಮನೆ ಕಟ್ಟಲು ಅಡಿಪಾಯ ತೊಡವ ಸಂದರ್ಭದಲ್ಲಿ ದೊರಕಿರುವ ಈ ಮೂರ್ತಿಯನ್ನು ತ್ರಯಾಂಭಕೇಶನ ಎಡಭಾಗದಲ್ಲಿ ಗೋಡೆಯ ಮೇಲೆ ಇಂತಹ ಮೂರ್ತಿಗಳನ್ನು ಇಡಲಾಗಿದೆ. ಬಲ್ಲಟಗಿ ಈಶ್ವರ ದೇವಾಲಯದ ಪಕ್ಕದ ಹೊರಭಾಗದಲ್ಲಿ ಮತ್ತು ಗಿರಿಜವ್ವನ ಕಟ್ಟೆಯ ಮೇಲೆ ಕಾಣಬಹುದಾಗಿದೆ. ಇದು ಬೇರೆ ಬೇರೆ ಭಾಗಗಳಲ್ಲಿ ಕಂಡುಬಂದರೂ ಅವು ಬಹಳಷ್ಟು ಭಗ್ನಾವಶೇಷಗಳಿಂದ ಕೂಡಿದೆ.

## ದ್ವಾರಪಾಲಕ ಮೂರ್ತಿಗಳು

ಪ್ರತಿ ಶೈವ ದೇವಾಲಯದ ಪ್ರವೇಶದ್ವಾರ ಇಲ್ಲವೆ ಅಂತರಾಳದ ಎಡಭಾಗದಲ್ಲಿ ದ್ವಾರ ಪಾಲಕರಿರುವುದು ಸಾರ್ವಸಾಮಾನ್ಯವಾಗಿ ಕಾಣಬಹುದಾಗಿದೆ. ಆಯಾ ಮುಖ್ಯ ದೇವರ ಸೇವಕರೆಂದು ಕರೆಯಲಾಗುತ್ತದೆ. ಕುರುಡಿಯ ರಾಮಲಿಂಗೇಶ್ವರ ದೇವಾಲಯದ ಸಪ್ತ ಮಾತೃಕೆಯರನ್ನು ಕಪ್ಪಗಲ್ ದೇವಾಲಯ ಪಕ್ಕದಲ್ಲಿರುವ ಬಾವಿಯೊಳಗೆ ಇಳಿಯುವ ಬಲ ಮಗ್ಗಲಿನಲ್ಲಿ ಮೂರ್ತಿಶಿಲ್ಪವನ್ನು ಇಡಲಾಗಿದೆ. ೨ ಅಡಿ ಎತ್ತರ ೪ ಅಡಿ ಅಗಲವಿದೆ ಅದೇ ರೀತಿಯಾಗಿ ಕವುತಾಳದ ತ್ರಯಾಂಬಕೇಶ್ವರ ದೇವಾಲಯದ ಮುಂದಿನ ಕಟ್ಟೆಯ ಮೇಲೆ ಸಪ್ತ ಮಾತೃಕೆಯರ ಮೂರ್ತಿಗಳನ್ನ ಕಾಣಬಹುದಾಗಿದೆ.

## ಮಹಿಷಾಸುರ ಮರ್ದಿನಿ

ಕವುತಾಳ ಗ್ರಾಮದ ತ್ರಯಾಂಭಕೇಶ್ವರ ದೇವಾಲಯದಲ್ಲಿರುವ ಮಹಿಷಾಸುರಮರ್ದಿನಿಯು ಚತುರ್ಭುಜ ಧಾರಿಯಾಗಿ ನಿಂತಿರುವ ಈಕೆಯು ಕೀರಿಟಧಾರಿಯಾಗಿದ್ದು ಕಿವಿಯಲ್ಲಿ ಕುಂಡಲಗಳಿದ್ದು ಕೊರಳಲ್ಲಿ ವಿವಿಧ ಬಗೆಯ ಹಾರಗಳಿವೆ. ಹಾಗೆಯೇ ಕೈಗಳಲ್ಲಿ ಭುಜದ ಅರ್ತಿ ಕೇಯೂರ ಕೈಗಡಗಗಳಿವೆ. ಮೇಲಿನ ಕೈಯಲ್ಲಿ ಶಂಕ ಚಕ್ರಗಳಿದ್ದು ಕೆಳಗಿನ ಎರಡು ಕೈಯಲ್ಲಿರುವ ತ್ರಿಶೂಲದಿಂದ ಕೋಣವನ್ನು ಕೋಣವನ್ನು ತಿವಿಯುವಂತಿದೆ. ಕಟಿಬಂಧ ಇಳಿವಸ್ತ್ರವನ್ನು ಧರಿಸಿದ ಈ ಮೂರ್ತಿಯು ಮೊಣಕಾಲಿನ ಕೆಳಭಾಗದ ಒಂಭಾಗದಲ್ಲಿ ಸಿಂಹವಿದೆ. ಸುಂದರವಾಗಿ ಕಪ್ಪು ಶಿಲೆಯ ಮೇಲೆ ಕೆತ್ತಲಾಗಿದೆ. ಇದು ರಾಷ್ಟ್ರಕೂಟರ ಕಾಲದ್ದಾಗಿರಬಹುದು. ಅದೇ ರೀತಿ ಬಲ್ಲಟಗಿಯ ಗಿರಿಜವ್ವನ ಕಟ್ಟೆ ಮೇಲೆ ಕೂಡ ಕಾಣಬಹುದಾಗಿದೆ. ಅರಸರಲ್ಲಿ ಇತ್ತೀಚಿಗೆ ಸ್ಥಾಪಿಸಿರುವ ಶಿಲೆಗಳನ್ನು ಹೆಚ್ಚಾಗಿ ಕಾಣುತ್ತೇವೆ.

## ಕೇಶವನ ಮೂರ್ತಿ

ಕಪ್ಪಗಲ್ ಗ್ರಾಮದ ಪ್ರಾರಂಭದಲ್ಲಿ ರಾಮಲಿಂಗೇಶ್ವ ಗುಡಿಯ ಹತ್ತಿರ ಉರಭಾವಿಯಿದ್ದು ಮದ್ಯದಲ್ಲಿ ಊರು ಒಳಗೆ ಪ್ರವೇಶಿಸುವ ದಾರಿಯಿದೆ. ಇದರ ಎಡಭಾಗದಲ್ಲಿ ಕೇಶವ ದೇವಾಲಯವಿದ್ದು ಶಿಥಲಗೊಂಡಿದೆ. ಎತ್ತರದ ವೇದಿಕೆಯಿಲ್ಲದ ರಂಗಮಂಟಪದಲ್ಲಿ ೪ ಕಂಬಗಳಿದ್ದು ಗರ್ಭಗುಡಿಯಲ್ಲಿ ಎತ್ತರವಾದ ಜಗಲಿಯ ಮೇಲೆ ಚತುರ್ಭುಜಧಾರಿಯಾದ ಈ ಮೂರ್ತಿಯ ಸಮಭಂಗಿಯಲ್ಲಿ ಸ್ಥಾನಿಕವಾಗಿದ್ದು ಕೊರಳಲ್ಲಿ ಕಂಠಾಭರಣ ಮೇಲಿನ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಕವನ್ನು ಹಿಡಿದಿದ್ದಾನೆ. ಕೆಳಗಿನ ಕೈಗಳಲ್ಲಿ ಪದ್ಮ ಮತ್ತು ಗದೆಗಳಿವೆ. ನಡುವಿನಲ್ಲಿ ನಡುಬಂಧ ಹಾಗೂ ಅಲಂಕಾರಯುಕ್ತ ಮೊಣಕಾಲಿನವರೆಗೆ ಧೋತಿ ಇದ್ದು ಕಾಲುಗಳಲ್ಲಿ ಕಾಲುಗಡಗವಿದೆ ಸುತ್ತಲೂ ಪ್ರಭಾವಗಳಿ ಇದೆ. ಬಾಗಿಲ ಮೇಲೆ ಗಜಲಕ್ಷ್ಮಿಯ ಚಿತ್ರವಿದ್ದು ಕಲ್ಯಾಣ ಚಾಲುಕ್ಯರ ಪೂರ್ವ ಕಾಲದ್ದಾಗಿದೆ.



## ನಾಗಶಿಲ್ಪ

ಕುರುಡಿಯ ಈಶ್ವರ ದೇವಾಲಯದ ಮುಂದಿನ ಜಗಲಿಯ ಮೇಲೆ ನಾಲ್ಕು ವಿವಿಧ ನಾಗಶಿಲ್ಪಗಳು ಕಂಡುಬರುತ್ತವೆ. ಇವು ರಾಷ್ಟ್ರಕೂಟರ ಕಾಲಕ್ಕೆ ಸೇರಿದವುಗಳಾಗಿರಬಹುದು. ಮೊದಲ ಬಲಭಾಗದ ಶಿಲ್ಪದಲ್ಲಿ ನಾಗಿಣಿಯ ಚಿತ್ರವಿದ್ದು ಆಕೆಯ ಬಲಭಾಗದಲ್ಲಿ ನಾಗವಿದೆ. ಇನ್ನೊಂದು ಜೊಡಿ ಶಿಲ್ಪದ ಬಲಎಡಭಾಗದಲ್ಲಿ ನಾಗ-ನಾಗಣಿ ಚಿತ್ರವಿದ್ದು ಇದ್ದು ಹಿಂದೆ ಪ್ರಭಾವಳಿ ಕಂಡುಬರುತ್ತದೆ. ನಾಗಶಿಲ್ಪ ತಳುಕು ಹಾಕಿಕೊಂಡಿರು ನಾಗಗಳು ಬಲಭಾಗದಲ್ಲಿದ್ದು ಎಡಭಾಗದಲ್ಲಿ ನಾಗಿಣಿಯರ ಉಬ್ಬು ಚಿತ್ರವಿರುವುದನ್ನು ನೋಡಿದರೆ ನಾಗ-ನಾಗಿಣಿಯರ ಶಿಲ್ಪಗಳಾಗಿದ್ದು ಇವುಗಳನ್ನು 'ನಾಗಮಿಥುನ' ಶಿಲ್ಪವೆಂದು ಕರೆಯಲಾಗುತ್ತದೆ. ಇದರ ಮುಂದೆ ಈಗ ಸರ್ಕಾರದವರು ಬೋರವೆಲನ್ನು ಹಾಕಿಸಿದ್ದಾರೆ. ಊರು ಜನ ಈಗಲೂ ಪೂಜಿಸುತ್ತಾರೆ. ಇದರಲ್ಲಿ ಒಂದು ಗಾತ್ರದಲ್ಲಿ ದೊಡ್ಡದಿದ್ದು ಉಳಿದ ಮೂರು ಶಿಲ್ಪಗಳು ಸುಮಾರು ೩ಅಡಿ ಎತ್ತರದಲ್ಲಿವೆ. ಎರಡು ಶಿಲ್ಪಗಳಲ್ಲಿ ನಾಲ್ಕು ಬಾರಿ ಸುರುಳಿ ಸುತ್ತಿಕೊಂಡು ಈ ಶಿಲ್ಪಗಳು ಹೆಡೆಯಿಂದ ಆಕರ್ಷಕವಾಗಿ ಕಾಣುತ್ತಿವೆ. ಈಶ್ವರ ದೇವಾಲಯದ ಹೊರಾಂಗಣದಲ್ಲಿದೆ. ಬೇರೆ ಬೇರೆ ಗ್ರಾಮಗಳಲ್ಲಿ ಇಂತಹ ನಾಗ-ನಾಗಿಣಿಯರ ಉಬ್ಬು ಚಿತ್ರವಿರುವುದು ಅಪರೂಪ ಒಂಟಿಯಾಗಿರುವ ನಾಗನನ್ನು ಹೆಚ್ಚಾಗಿ ಕಾಣುತ್ತವೆ.

ಇದೇ ಗ್ರಾಮದ ಹನುಮಂತನ ದೇವಾಲಯದಲ್ಲಿ ಹನುಮಂತನ ಶಿಲಾ ಮೂರ್ತಿಯಿದ್ದು ಬೊಂಕದ ಸೊಂಟದ ಮೇಲೆ ಎಡಗೈಯನ್ನು ಇಟ್ಟಕೊಂಡು ಎಡಗಾಲನ್ನು ಮುಮ್ಮುಖವಾಗಿ ಚಾಚಿಕೊಂಡು ಬಲಗೈಯನ್ನು ಎತ್ತಿದ್ದಾನೆ. ಹನುಮಂತನ ಬಾಲವು ನಡುವಿನಿಂದ ಮುಖದ ಮುಂದಿನಿಂದ ಮೊಣಕಾಲವರೆಗೆ ಇಳಿಬಿದಿದ್ದೆ. ಕೊರಳಲ್ಲಿ ದಪ್ಪವಾದ ಹಾರವಿದ್ದು ಎದೆಯ ಮಧ್ಯಭಾಗದಲ್ಲಿ ರಾಮನನ್ನು ಚಿತ್ರಿಸಲಾಗಿದ್ದು ಪಾದದ ಕೆಳಭಾಗದಲ್ಲಿ ಸೂರ್ಯ, ಭೈರವೇಶ್ವರ ಇನ್ನೊಂದು ಸಣ್ಣ ಗಾತ್ರದ ಶಿಲ್ಪಗಳಿವೆ. ಕಪ್ಪಗಲ್ಲಿನ ಊರು ಬಾವಿಯಲ್ಲಿ ಸೂರ್ಯನ ಮೂರ್ತಿಯಿದ್ದು ಎರಡು ಕೈಗಳಲ್ಲಿ ಪದ್ಮವನ್ನು ಹಿಡಿದಿದ್ದಾನೆ. ಕಾಲ್ಗಡಗ ಸೊಂಟಕ್ಕೂ ಆಭರಣಗಳನ್ನು ಕೊರಳಲ್ಲಿ ಧರಿಸಿ ಕೀರಿಟವನ್ನು ಧರಿಸಿ ಹಿಂಭಾಗದಲ್ಲಿ ಸೂರ್ಯನ ಚಿತ್ರವಿದೆ ಬಾವಿಯ ಬಲಗಡೆಯಲ್ಲಿ ಈ ಮೂರ್ತಿಯಿದೆ.

## ಜಿನಮೂರ್ತಿ

ಬಲ್ಲಟಗಿ ಗಿರಿಜವ್ವ ಗದ್ದುಗೆ ಪಕ್ಕದಲ್ಲಿ ಜನಮೂರ್ತಿಯಿದ್ದು ಪದ್ಮಾಸನದಲ್ಲಿ ಕುಳಿತು ಧ್ಯಾನಿಸುತ್ತಿರು ಭಂಗಿಯಲ್ಲಿದೆ. ಒಡವೆ ಇನ್ನಿತರ ಅಲಂಕಾರ ಕಾಣುವುದಿಲ್ಲ. ಎರಡು ಕಡೆಗಳಲ್ಲಿ ಸ್ತ್ರೀಯರು ನಿಂತಿದ್ದಾರೆ. ಜಿನಮೂರ್ತಿಯ ಶಿರದ ಮೇಲೆ ಸರ್ಪದ ಹೆಡೆಯಿದ್ದು ಬಿಳಿಕಲ್ಲಿನಲ್ಲಿ ಕೆತ್ತಲಾಗಿದೆ. ೩ಅಡಿ ಎತ್ತರದ ಬಯಲು ಸ್ಥಳದಲ್ಲಿ ಇರಿಸಲಾಗಿದೆ. ಮಳೆಗಾಳಿಗೆ ಮಕ್ಕಳು ಆಟವಾಡುವಾಗ ವಸ್ತುಗಳು ತಗುಲಿ ಮೂರ್ತಿಯು ಭಗ್ನಗೊಂಡಿದೆ. ಇದನ್ನು ದಕ್ಷಿಣಕ್ಕೆ ಮುಖಮಾಡಿ ಇಡಲಾಗಿದೆ. ಈಗ ಶಾಲೆಯ ಸಮೀಪವಿರುವ ಜಾಗದಲ್ಲಿ ಜಗದೇಕ ಮಲ್ಲನ ರಾಣಿ ಸೋಮಲದೇವಿ ಪಂದಿರ್ಕ್ಕೆಯ ನೆಲೆವೀಡಿನಲ್ಲಿದ್ದಾಗ ಎಡದೊರೆಯ ಭತ್ತಗ್ರಾಮದವಾದ ಈಗ್ರಾಮದ ಬಸದಿಗೆ ಭೂಮಿ, ತೋಟ, ಮನೆ, ಗಾಣವನ್ನು ದಾನವಾಗಿ ಕೊಟ್ಟಿರುವ ವಿಷಯ ಕ್ರಿ.ಶ.೧೦೨೯ರ ಬಲ್ಲಟಗೆಯ ಈ ಶಾಸನದಿಂದ ತಿಳಿದುಬರುತ್ತದೆ.

ಅದೇ ರೀತಿಯಾಗಿ ದದ್ದಲದಲ್ಲಿ ದೊರೆತ ಶಾಸನದ ಮೂಲಕ ಮಾಕಿಸೆಟ್ಟಿಯು ಪೊನ್ನಪಾಳಿನಲ್ಲಿ (ಈಗಿನ ಪದ್ದಲಿ ಪನ್ನೂರು) ಗಿರಿಕೋಟೆಮಲ್ಲ ಎಂಬ ಜಿನಾಲಯವನ್ನು ಕಟ್ಟಿಸಿ ದಾನವನ್ನು ಬಿಡುತ್ತಾನೆ. ಈಗ ಅಲ್ಲಿ ಯಾವ ಅವಶೇಷಗಳು ಕಂಡು ಬರುವುದಿಲ್ಲ. ಜೈನ ಸನ್ಯಾಸಿಗಳು ಮಳೆಗಾಲದ ನಾಲ್ಕು ತಿಂಗಳ ಹೊರತು ಉಳಿದ ಕಾಲದಲ್ಲೆಲ್ಲಾ ವಿಹರಿಸುತ್ತಿರಬೇಕೆಂಬ ನಿಯಮವಿದ್ದರೂ ಕ್ರಮೇಣ ಈ ನಿಯಮ ಸಡಿಲಗೊಂಡು ಮುನಿಗಳು ಬಸದಿಗಳಲ್ಲಿ ವಾಸಿಸಲಾರಂಭಿಸಿದರು. ಜೈನ ದೇವಾಲಯಗಳನ್ನು ಬಸದಿ (ವಸತಿ)ಗಳೆಂದು ಕರೆಯುವುದಕ್ಕೆ ಕಾರಣ ಇದೇ ಇರಬಹುದು. ಈ ದೇವಸ್ಥಾನಗಳನ್ನು 'ಬಸದಿ' ಎಂದು ಚೈತ್ಯಾಲಯ, ಚೇದಿಯ (ಚೈತ್ಯ) ಎಂದು ಜಿನಗಾರ ಎಂದು ಮುಂತಾಗಿ ಶಾಸನಗಳಲ್ಲಿ ಕರೆಯಲಾಗಿದೆ[೬]. (ಕನ್ನಡ ಶಾಸನಗಳ ಮಾನ್ವಿ ತಾಲೂಕಿನ ಒಂದು ಶಾಸನದಲ್ಲಿ ಜನಗಾರದಿಬ್ಬ ಎಂದು ಬಳಕೆಗೊಂಡಿದೆ.

## ರಸಸಿದ್ದರು

ಕಪ್ಪಗಲ್ ಗ್ರಾಮದ ಕೇಶವ ದೇವಾಲಯಕ್ಕೆ ಹೊಂದಿಕೊಂಡು ದಕ್ಷಿಣಕ್ಕೆ ಮುಖಮಾಡಿ ಸ್ವಲ್ಪ ಅಂತರದಲ್ಲಿ ನಿಲ್ಲಿಸಲಾಗಿದೆ. ಊರಿನ ಜನ ಇವರನ್ನು, ಊರನ್ನು ಕಾಯುವ 'ರಸಸಿದ್ಧರು' ಎಂದು ಕರೆಯುತ್ತಾರೆ. ಮನುಷ್ಯನ ಎತ್ತರಕ್ಕೆ ಮೂರ್ತಿಗಳಿದ್ದು ಒಂದು ಮೂರ್ತಿಯ ಬಲಗಾಲನ್ನು ಗದೆಯ ಮೇಲೆ ಇಟ್ಟು ನಿಂತಿರುವ ಭಂಗಿಯಾದರೆ ಇನ್ನೊಂದು ಸರಳವಾಗಿ ಬಲಗೈಯಲ್ಲಿ ಏನನ್ನೊ ಹಿಡಿದಂತಿದ್ದು ಎಡಭಾಗದ ಕೈಯಲ್ಲಿ ಗದೆಯನ್ನು ಹಿಡಿದುಕೊಂಡಿದ್ದಾರೆ. ಊರ ಬೀದಿಯ ಪಕ್ಕದಲ್ಲಿ ಕೇಶವ ದೇವಾಲಯದ ಹೊರಭಾಗದಲ್ಲಿ ನಿಲ್ಲಿಸಲಾಗಿದ್ದು ಈಗ ಇವರಿಗೆ ಬಣ್ಣವನ್ನು ಹಚ್ಚಲಾಗಿದೆ. ಕೈಗಳಲ್ಲಿ ಕೈಗಡಗಗಳಿದ್ದು ತಲೆಯಮೇಲೆ ವಸ್ತ್ರದಿಂದ ಮಾಡಿದ ಟೋಪಿಗಳ ಹಾಗೆ ಕಾಣುತ್ತವೆ. ತೋಳಿನಲ್ಲಿ ತೋಳಬಂದಿಯನ್ನು ಹಾಕಿದ್ದಾರೆ. ಕಾಲಿನಲ್ಲಿ ಕಾಲ್ಗಡಗವನ್ನು ಹಾಗಿದ್ದಾರೆ.

## ಬಾವಿಯಲ್ಲಿ ಉಬ್ಬು ಚಿತ್ರಗಳು

ಮಾನ್ವಿ ಪಟ್ಟಣದ ಹನುಮಯ್ಯ ತಾತನ ಗದ್ದುಗೆಗೆ ಹೋಗುವ ದಾರಿಯಲ್ಲಿ ಊರ ಬಾವಿಯಿದ್ದು ಇದರಲ್ಲಿ ಆನೆ, ಆಮೆ, ಮೀನು, ವರಹ ಅದರ ಮುಂದೆ ಮತ್ತೊಂದು ಮೀನು ಹಿಂದೆ ತಿರುಗಿ

ಹೋಗುತ್ತಿರುವ ಪಶು, ಒಂದು ಕಡೆ ಗರುಡನ ಶಿಲಾಮೂರ್ತಿಯನ್ನು ಅರ್ಧ ಕುಂತಿರುವ ಭಂಗಿಯಲ್ಲಿದೆ. ಇದೇ ಬಾವಿಯ ಮೇಲ್ಭಾಗದ ಬಲಗಡೆಯಲ್ಲಿ ವೀರಗಲ್ಲನ್ನು ನಿಲ್ಲಿಸಲಾಗಿದ್ದು ಮೂರು ಹಂತದಿಂದ ಕೂಡಿದೆ ಕೆಳಹಂತಲದಲ್ಲಿ ವೀರನೋರ್ವ ಬಿಲ್ಲನ್ನು ಮುಂದೆ ಚಾಚಿ ಬಾಣವನ್ನು ತೆಗೆದುಕೊಳ್ಳುತ್ತಿದ್ದಾನೆ. ಬಿಲ್ಲಿನ ಮುಂದೆ ಬಾಣ ನಾಟಿದ ಮತ್ತೊಬ್ಬ ವೀರ ಕೆಳಗೆ ಕುಸಿದು ಬೀಳುವ ದೃಶ್ಯವಿದ್ದು ವೀರನ ಹಿಂಬಾಗದಲ್ಲಿ ತರುಗಳನ್ನು ಸತ್ತವರನ್ನು ಬಿಡಿಸಲಾಗಿದೆ. ಮಧ್ಯಸ್ತರದಲ್ಲಿ ವೀರನನ್ನು ದೇವತಾ ಸ್ತ್ರೀಯರು ಸ್ವರ್ಗಕ್ಕೆ ಹೆಗಲ ಮೇಲೆ ಕೈ ಹಾಕಿಕೊಂಡು ಕರೆದೊಯುತ್ತಿದ್ದಾರೆ ಮೇಲ್ಭಾಗದ ಚಿತ್ರವು ಈಶ್ವರ ನಂದಿ ಮೂರ್ತಿಯನ್ನು ಎಡಭಾಗದ ಚಿತ್ರದಲ್ಲಿ ಕೈಮುಗಿದು ಕುಳಿತಿರುವ ವೀರನ ದೃಶ್ಯವಿದೆ ಇದೊಂದು ತುರುಗೋಳ್ ಶಿಲಾ ಶಾಸನವಾಗಿದೆ. ವಿಶಾಲವಾದ ಸ್ಥಳದಲ್ಲಿ ಇದನ್ನು ಇಡಲಾಗಿದೆ. ಈಗ ಇಲ್ಲಿ ಗಿಡ ಊರಗಳು ಬೆಳೆದಿದೆ ಇಂತಹ ವೀರಗಲ್ಲು ಸಿಗುವುದು ಬಹಳ ಕಡಿಮೆ.

ಭಾರತೀಯರು ಶಿಲ್ಪಿಕಾರರು ಪಾಶ್ಚಾತ್ಯ ಕಲೆಗಾರರ ಪ್ರಭಾವದಿಂದ ಹೊಸ ಹೊಸ ಮಾರ್ಗ ತಂತ್ರ ಮತ್ತು ವಾಸ್ತುಗಳನ್ನು ಇತ್ತೀಚಿಗೆ ಅಳವಡಿಸಿಕೊಳ್ಳುತ್ತಿರುವರು. ಆದರೆ ನಮ್ಮ ಪೂರ್ವಿಕರ ಮನದಲ್ಲಿ ಶಿಲ್ಪ ಎಂದರೆ ದೇವಾನುದೇವತೆಗಳ ಪರಿವಾರಗಳು ಆದುದರಿಂದ ಭಾರತೀಯ ಶಿಲ್ಪ ಬೆಳವಣಿಗೆಯೆಂದರೆ ಧರ್ಮದಿಂದ ಪ್ರಭಾವಿತವಾದ ಮೂರ್ತಿ ಶಿಲ್ಪದ ಬೆಳವಣಿಗೆ ಎಂದೇ ಹೇಳಬೇಕಾಗುತ್ತದೆ, ಇವುಗಳು ಮನುಷ್ಯನಲ್ಲಿ ಭಕ್ತಿ ಗೌರವದ ಭಾವನೆಗಳು ಮೂಡಲು ಕಾರಣವಾದವು. ಇಂತಹ ಮೂರ್ತಿಶಿಲ್ಪಗಳು ಉಬ್ಬು ಶಿಲ್ಪಗಳು ತಾಲೂಕಿನ ಬೇರೆ ಬೇರೆ ಅರಸರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಕಾಣಸಿಗುತ್ತದೆ.

### ೩.೩.ಕೋಟೆ-ಕೊತ್ತಲಗಳು

ಮಾನ್ವಿ ರಾಯಚೂರಿನಿಂದ ೪೯ ಕಿ.ಮೀ. ದೂರದಲ್ಲಿದೆ ಅಕ್ಷಾಂಶ ೧೬° ಎತ್ತರ ಮತ್ತು ರೇಖಾಂಶ ೭೭°೨ ಪೂರ್ವದಲ್ಲಿದೆ. ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾಗಿ, ದೀರ್ಘವಾದ ಐತಿಹಾಸಿಕ ಪರಂಪರೆಯುಳ್ಳ ಮಾನ್ವಿಯಲ್ಲಿ ಕೋಟೆ ಕೆರೆ, ಬಾವಿ, ದೇವಾಲಯ, ಮಸೀದಿ ಮುಂತಾದವುಗಳನ್ನು ಒಳಗೊಂಡಿದೆ.

### ಐತಿಹಾಸಿಕ ಹಿನ್ನೆಲೆ

ಮಾನ್ವಿಯು ಇತಿಹಾಸ ಪೂರ್ವ ಕಾಲದಲ್ಲಿ ಮಾನವನ ನೆಲೆಯಾಗಿತ್ತು. ಇಲ್ಲಿಯ ಬೆಟ್ಟದ ಪಶ್ಚಿಮಕ್ಕೆ ಬೆಟ್ಟದ ಬುಡದಲ್ಲಿ ನವಶಿಲಾಯುಗದ ನಿವೇಶನವಿದೆ. ಇತಿಹಾಸ ಕಾಲಕ್ಕೆ ಬಂದಾಗ ಶಾಸನಾಧಾರಗಳು ಸಿಗುವುದು ೧೧ನೇ ಶತಮಾನದಿಂದ. ಶಾಸನಗಳಲ್ಲಿ ನಗರದ ಹೆಸರು ಮನುವೆ, ಮಾನುವ, ಮತ್ತು ಮಾನವೆ ಎಂದು ಉಲ್ಲೇಖಗೊಂಡಿವೆ. ಕಲ್ಯಾಣ ಚಾಲುಕ್ಯರ ಅರಾಸ ಒಂದನೇ ಸೋಮೇಶ್ವರನ ಸಾಮಂತ ಹೈಹಯ ಕುಲದ ರೇವರಸನು ಎಡದೊರೆ ೨೦೦೦ ವಿಭಾಗವನ್ನು ಆಳುತ್ತಿದ್ದಾಗ ಆತನ ಅಧಿಕಾರ ತಂತ್ರಪಾಲ ಗಂಗರ ಚಾವುಂಡಮಯ್ಯನು ಕ್ರಿ.ಶ.೧೦೫೨ರಲ್ಲಿ ಮಾನ್ವಿಯ **ದಿಗ್ಗಿಗೆ ಕೆರೆಗೆ ಭೂದಾನವನ್ನು ನೀಡಿದ**[೯]. ಈ ಕೆರೆಯು ಇಂದಿಗೂ ಸುಸ್ಥಿತಿಯಲ್ಲಿದ್ದು ಈಗ ಇದನ್ನು ದಿಡ್ಡಿಕೆರೆ ಎಂದು ಕರೆಯುತ್ತಾರೆ. ೨ನೇ ಸೋಮೇಶ್ವರನ ಕಾಲದಲ್ಲಿ ಮಹಾಸಾಮಂತ ಮಲೆಯಮರಸನು ಮಾನುವೆಯನ್ನು ಆಳುತ್ತಿದ್ದನು. ಈತನು ಗಿರಿಕೋಟೆಯಲ್ಲಿ ಎಂಬ ಬಿರುದನ್ನು ಹೊಂದಿದ್ದನು. ಮರಿಸೆಟ್ಟಿಯು ಪನ್ನೂರಿನಲ್ಲಿ

ಕಟ್ಟಿಸಿದ ಗಿರಿಕೋಟೆಯಲ್ಲಿ ಜಿನಾಲಯಕ್ಕೆ ಈತ ಕ್ರಿ.ಸ.೧೦೬೯ರಲ್ಲಿ ಭೂದಾನ ಮಾಡಿದನು[೩]. ಜಿನಾಲಯವನ್ನು ಮಲೆಯಮರಸನ ಹೆಸರಿನಲ್ಲಿ ಕಟ್ಟಿಸಿದಂತೆ ಕಾಣುತ್ತದೆ. ಹೊಯ್ಸಳರಸರು ಗಿರಿದುರ್ಗಮ ಬಿರುದನ್ನು ಹೊಂದಿದಂತೆ ಈತನು ಗಿರಿಕೋಟೆಮಲ್ಲ ಎಂಬ ಬಿರುದನ್ನು ಹೊಂದಿದ್ದಾನೆ. ೪ನೇ ಸೋಮೇಶ್ವರನ ಕಾಲದಲ್ಲಿ ಕ್ರಿ.ಶ.೧೧೯೧ರಲ್ಲಿ ಮಹಾಮಂಡಳೇಶ್ವರ ಮೈಲುಗಿದೇವ ಮಾನ್ವಿಯನ್ನು ಆಳುತ್ತಿದ್ದನು. ಈತನನ್ನು ಮಾನುವೆಯ ಮಹಾಮಂಡಳೇಶ್ವರ ಮೈಲುಗಿ ದೇವನೆಂಬ ಶಾಸನದಲ್ಲಿ ಉಲ್ಲೇಖಿಸಿದೆ[೪].

ಹೊಯ್ಸಳರಸ ೨ನೇ ಬಲ್ಲಾಳನು ಗದಗ ತಾಲೂಕಿನ ಸೋರಮಾರಿನಲ್ಲಿ ನಡೆದ ಯುದ್ಧದಲ್ಲಿ ಯಾದವ ಭಿಲ್ಲಮನನ್ನು ಸೋಲಿಸಿದ ನಂತರ ಪ್ರಬಲವಾದ ಕುಕ್ಕನೂರು ಮತ್ತು ಮಾನ್ವಿ ಕೋಟೆಗಳನ್ನು ವಶಪಡಿಸಿಕೊಂಡನು[೫]. ಬಲ್ಲಾಳನು ಕ್ರಿ.ಶ. ೧೧೯೦ರ ಶಾಸನವು ಆತನು ಗೆದ್ದ ಕೋಟೆಗಳ ಪಟ್ಟಿಯಲ್ಲಿ ಸೊರಟುರು, ಯಲ್ಬುರ್ಗಾ, ಹಾಲ್ವಿ, ಮಾನ್ವಿಗಳನ್ನು ಉಲ್ಲೇಖಿಸುತ್ತದೆ[೬]. ಕೆಲವೇ ವರ್ಷಗಳಲ್ಲಿ ಚಾಲುಕ್ಯ ಹೊಯ್ಸಳ ಮತ್ತು ಕಾಕತಿಯರು ಒಬ್ಬರ ವಶದಲ್ಲಿದ್ದ ಕೋಟೆಯನ್ನು ಮತ್ತೊಬ್ಬರು ವಶಪಡಿಸಿಕೊಳ್ಳುತ್ತಿದ್ದರು ಕ್ರಿ.ಶ.೧೨೯೪ರಲ್ಲಿ ಕಾಕತಿಯ ವಶದಲ್ಲಿತ್ತು ಕಾಕತಿಯರು ಅರಸ ಪ್ರತಾಪರುದ್ರನ ಸಾಮಂತ ಗೋನಗನ್ನಯ್ಯ ರೆಡ್ಡಿಯ ದಂಡನಾಯಕ ವಿಠಲನಾಥನು ಆದವಾನಿ, ತುಂಬಳ ಹಾಲ್ವಿ ಮತ್ತು ಮಾನ್ವಿ ಕೋಟೆಗಳನ್ನು ಗೆದ್ದು ರಾಯಚೂರಿನಲ್ಲಿ ಕೋಟೆಯನ್ನು ಕಟ್ಟಿಸಿದನು[೭].

ವಿಜಯನಗರ ಮತ್ತು ಮುಸ್ಲಿಂ ಅರಸರ ನಡುವೆ ನಡೆದ ದೋ-ಅಬ್ ಯುದ್ದಗಳ ಫಲಿತಾಂಶಕ್ಕನುಗುಣವಾಗಿ ಕೋಟೆಯು ವಿಜಯೀ ಅರಸರ ಪಾಲಾಗುತ್ತಿತ್ತು. ಬಹುಮನಿ ಅರಸರಥ ಪಿರೋಜಶಾಹನು ಕ್ರಿ.ಶ.೧೪೦೬-೦೭ರಲ್ಲಿ ಈ ಕೋಟೆಯನ್ನು ಗೆದ್ದು, ಕೋಟೆಯನ್ನು ದುರಸ್ತಿ ಮಾಡಿ ಮಲ್ಲಿಕ್ ಸಫದರನನ್ನು ಕೋಟೆಯ ಅಧಿಕಾರಿಯನ್ನಾಗಿ ನೇಮಿಸಿದನು[೧೦] ಕ್ರಿ.ಶ.೧೫೦೫ ರಿಂದ ೧೫೦೯ ರವರೆಗೆ ಆಳಿದ ವಿಜಯ ನಗರದ ವೀರನರಸಿಂಹನು ಬಿಜಾಪುರದ ಯೂಸಫ್ ಆದಿಲ್ ಖಾನನನ್ನು ಸೋಲಿಸಿ ರಾಯಚೂರು ಮುದುಗಲ್ ಮಾನ್ವಿ ಕೋಟೆಗಳನ್ನು ವಶಪಡಿಸಿಕೊಂಡನು. ಇವರಿಬ್ಬರ ಮಧ್ಯ ಮಾನ್ವಿಯಲ್ಲಿ ಈ ಯುದ್ಧ ನಡೆಯಿತು. ಸುಲ್ತಾನನ ತನ್ನ ಪ್ರಾಣ ರಕ್ಷಣೆಗಾಗಿ ಅಭೇಧ್ಯವಾದ ಕೋಟೆಯೊಳಗೆ ಹತ್ತಿ ಹೋದನು. ಅರಸನು ಅವನನ್ನು ಕೋಟೆಯ ಮಧ್ಯದ್ಯಲ್ಲಿ ಹಿಡಿದು ಬಂಧಿಸಿದನು. ಭಯಭೀತನಾದ ಸುಲ್ತಾನನು ಶರಣಾದಾಗ ಅವನನ್ನು ಮುಕ್ತಗೊಳಿಸಿದನು[೧೧]. ವಿಜಯನಗರದ ಅರಸ ಕೃಷ್ಣದೇವರಾಯ ಮತ್ತು ಬಿಜಾಪುರದ ಇಸ್ಮಾಯಿಲ್ ಆದಿಲ್ ಶಾಹರ ನಡುವೆ ಕ್ರಿ.ಶ.೧೫೨೦ರಲ್ಲಿ ರಾಯಚೂರಿನಲ್ಲಿ ಭೀಕರವಾದ ಯುದ್ಧ ನಡೆಯಿತು. ಯುದ್ಧದಲ್ಲಿ ಜಯಶಾಲಿಯಾದ ಕೃಷ್ಣದೇವರಾಯನ ವಶವಾಯಿತು. ಅದೇ ಸಮಯದಲ್ಲಿ ರಾಯನು ಮಾನ್ವಿ ಕೋಟೆಯನ್ನು ಜಯಸಿದನು. ಕೃಷ್ಣದೇವರಾಯನು ರಾಯಚೂರು ಆಲಂಪುರ, ಮಾನ್ವಿ, ಹಾವಗಲ್ ಮತ್ತು ಮಾಗಡಿ ಕೋಟೆಗಳನ್ನು ಗೆದ್ದುದು ಕ್ರಿ.ಶ.೧೫೨೧ರ ಶಾಸನದಲ್ಲಿ ದಾಖಲಾಗಿದೆ[೧೨]. ಈ ಕಾಲದಲ್ಲಿ ಮಾನ್ವಿ ಒಂದು ಆಡಳಿತ ವಿಭಾಗವಾಗಿ ಮಾನುವೆ ಸೀಮೆಯಾಗಿತ್ತು. ಸದಾಶಿವನ ಕಾಲದಲ್ಲಿ ಮಾನ್ವಿ ವಿಜಯನಗರ ಅರಸರ ವಶದಲ್ಲಿತ್ತು. ಮಾನ್ವಿಯಲ್ಲಿಯ ಕ್ರಿ.ಶ.೧೫೫೫ರ ಶಾಸನದಿಂದ ಇದು ಸ್ಪಷ್ಟವಾಗುತ್ತದೆ[೧೩]. ಕ್ರಿ.ಶ.೧೫೬೫ರಲ್ಲಿ ಜಯನಗರ ಪತನವಾದ ನಂತರವೂ ಇದು ಅರವೀಡು ಅರಸರ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ.೧೫೭೭ರಲ್ಲಿ ಶ್ರೀರಂಗರಾಯನು ಮಾನವಿ ದೇಶದೊಳಗಿನ ಮಡವಾಳ ಗ್ರಾಮವನ್ನು ಸುಧೀಂದ್ರ ತೀರ್ಥರಿಗೆ ದಾನವಾಗಿ ಕೊಟ್ಟನು[೧೪].

ಹದಿನಾರನೇ ಶತಮಾನದಲ್ಲಿ ಪರ್ಗಡೆ ಮಲ್ಲನೇಡುವಿನ ಮಗ ಸಿಂಗಣ ಮಾನ್ವಿಯಲ್ಲಿ ಹನುಮಂತ ದೇವರನ್ನು ಪ್ರತಿಷ್ಠಾಪಿಸಿ ಮುಂದೆ ವೀರಸ್ತಂಭವನ್ನು ನಿಲ್ಲಿಸಿದನು[೧೫]. ಸಜಾಪುರದಗೌಡ ಮಾಪರ ತಿಮ್ಮಯ್ಯ ಮಾನ್ವಿಯಲ್ಲಿ ಕ್ರಿ.ಶ. ೧೬೦೭ರಲ್ಲಿ ಒಂದು ಬಾವಿಯನ್ನು ಕಟ್ಟಿಸಿದನು. ಬಾವಿಯನ್ನು ಕಟ್ಟಲು ನರಸಾಪುರದ ಪೇಠೆಗೌಡ ತಿಮ್ಮಯ್ಯನು ಭೂಮಿಯನ್ನು ಇನಾಮಾಗಿ ಕೊಟ್ಟನು. ಬಾವಿಯ ಮೆಟ್ಟಲುಗಳನ್ನು ರಾಣಾದಾರ್‌ಶೇಕ್ ನಿಜಾಮ ಮಜಾಮದಾರ್ ಮುದೋಪ ನಿಷಾವನ್ ನಾಸರಪ್ಪ ಸ್ರನೋಬಲ್ ನಸಲಾವಿ ಮತ್ತು ಸೆಬನಿಸ ಅಂತಪ ಇವರ ಇವರ ಅಧಿಕಾರಾವಧಿಯಲ್ಲಿ ನಿರ್ಮಿಸಲಾಯಿತು[೧೬]. ಈ ಬಾವಿ ಊರ ಮಧ್ಯದಲ್ಲಿದ್ದು ಇದನ್ನು ಈಗ ಜಾಡರ ಬಾವಿಯೆಂದು ಕರೆಯುತ್ತಾರೆ.

## ಮಾನ್ವಿ ಕೋಟೆ

ಮಾನ್ವಿ ಕೋಟೆ ಬೆಟ್ಟದ ಮೇಲಿರುವ ಗಿರಿದುರ್ಗ ಬೆಟ್ಟದ ಉತ್ತರಭಾಗದ ನೆಲಮಟ್ಟದಲ್ಲಿ ಕೋಟೆಯಿದೆ. ಈಗಿನ ನಗರ ಕೋಟೆಯ ಹೊರಗಿದೆ. ಹಿಂದೆನೆಲಮಟ್ಟದಲ್ಲಿರವ ಕೋಟೆಯೊಳಗಿನ ವಿಶಾಲವಾದ ಪ್ರದೇಶದಲ್ಲಿ ಜನವಾಸವಿತ್ತು. ನಂತರ ಅದನ್ನು ತೆರವುಗೊಳಿಸಿ ಜನರೆಲ್ಲ ಹೊರಗೆ ಬಂದಿದ್ದಾರೆ. ಈಗ ಪುನಃ ಕೆಲವರು ಕೋಟೆಯೊಳಗೆ ವಾಸ ಮಾಡುತ್ತಿದ್ದಾರೆ.

ಬೆಟ್ಟದ ಮೇಲ್ಭಾಗದಲ್ಲಿ ಒಂದು ಸುತ್ತು ಕೋಟೆಯಿದೆ. ಬೆಟ್ಟದ ಉತ್ತರ ಭಾಗದಲ್ಲಿ ಕೆಳಮಟ್ಟದಲ್ಲಿ ಪೂರ್ವ ಪಶ್ಚಿಮ ದಿಕ್ಕಿನಲ್ಲಿ ಮತ್ತೊಂದು ಕೋಟೆಯಿದೆ. ಮೇಲಿನ ಕೋಟೆಯ ಪೂರ್ವ ಮತ್ತು ಪಶ್ಚಿಮ ಬದಿಗಳಿಂದ ಉತ್ತರಕ್ಕೆ ಚಾಚಿದ ಕೋಟೆಗೋಡೆಗಳು ನೆಲಮಟ್ಟದಲ್ಲಿ ಪೂರ್ವ ಪಶ್ಚಿಮಕ್ಕೆ ಇರುವ ಕೋಟೆಗೋಡೆಯನ್ನು ಸೇರುತ್ತವೆ. ಅದುದರಿಂದ ಇದು ಮೂರು ಸುತ್ತಿನಕೋಟೆ.

ನೆಲಮಟ್ಟದಲ್ಲಿ ಹರಡಿಕೊಂಡಿರು ಹೊರಕೋಟೆಯನ್ನು ದೊಡ್ಡ ಕಲ್ಲುಗಳಿಂದ ಕಟ್ಟಿದೆ. ಮುಂದೆ ಚೌಕಾಕಾರದಲ್ಲಿರುವ ಕಲ್ಲುಗಳ ಹಿಂಭಾಗ ಬೆಣೆಯಾಕಾರದಲ್ಲಿ ಚೂಪಾಗಿದೆ. ಇಂತಹ ಕಲ್ಲುಗಳ ಬಳಕೆ ವಿಜಯನಗರ ಕಾಲದಿಂದ ಪ್ರಾರಂಭವಾಯಿತು. ಕಟ್ಟಿದ ಈ ಕೋಟೆಯಲ್ಲಿ ಚೌಕಾಕಾರದ ಕೊತ್ತಲಗಳಿವೆ. ಕೋಟೆಗೆ ಉತ್ತರಾಭಿಮುಖವಾಗಿರುವ ಒಂದು ಬಾಗಿಲು ಇದು ಶಿಥಲವಾಗಿದ್ದು ಮೂಲರೂಪದಲ್ಲಿಲ್ಲ. ಇದೇ ಪ್ರವೇಶ ಒಳಭಾಗದಲ್ಲಿ ಅಂಕುಡೊಂಕಾಗಿದೆ. ಬಾಗಿಲ ಕಲ್ಲಿನ ಮೇಲೆ ಕುದರೆ ಸವಾರನೊಬ್ಬ ಹುಲಿಯೊಂದಿಗೆ ಹೋರಡುವ ಉಬ್ಬು ಶಿಲ್ಪವಿದೆ. ಇದರ ಪಕ್ಕದಲ್ಲಿ ಒಂದೊಂದು ಬಾವಿಗೆ ಒಬ್ಬ ಮನುಷ್ಯ ನಿಂತಿದ್ದಾನೆ. ಮತ್ತೊಂದು ಕಲ್ಲಿನ ಮೇಲೆ ಒಬ್ಬ ಮನುಷ್ಯನ ಶಿಲ್ಪವಿದೆ.

ಹೊರಕೋಟೆಯ ಒಳಗೆ ವಿಶಾಲವಾದ ಪ್ರದೇಶವಿದೆ. ಉತ್ತರ ದಿಕ್ಕಿನ ಕೋಟೆ ಗೋಡೆಯ ಹತ್ತಿರ ದಕ್ಷಿಣಕ್ಕೆ ಒಂದು ಮಸೀದಿ ಮತ್ತು ಬಾವಿ ಇವೆ. ಮಸೀದಿಯ ಆವರಣದ ಸುತ್ತ ಗೋಡೆಯಿದೆ. ಆವರಣಕ್ಕೆ ಉತ್ತರ ದಿಕ್ಕಿಗೆ ಬಾಗಿಲಿದೆ. ಬಾಗಿಲ ಕಟ್ಟಡ ದೊಡ್ಡದಾಗಿದೆ. ಪ್ರವೇಶದ ಬದಿಗಳಲ್ಲಿ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಎರಡು ಕಂಬಗಳ ಮೂರು ಅಂಕಗಳಿವೆ. ಎಡಭಾಗದ ಕಟ್ಟೆಯ ಮೇಲೆ ಒಂದು ಕೊಠಡಿಯಿದೆ. ಆವರಣದೊಳಗೆ ಪೂರ್ವಾಭಿಮುಖವಾಗಿರುವ ಮಸೀದಿಯಿದೆ. ನಾಲ್ಕು ಕಂಬಗಳ ಮಸೀದಿಯ ಕಟ್ಟಡ ಸರಳವಾಗಿದೆ. ಮಸೀದಿಯ ಎದುರಿಗೆ ಚೌಕಾಕಾರದ ನೀರಿನ ತೊಟ್ಟಿಯಿದೆ. ನೆಲಮಟ್ಟಕ್ಕಿಂತ ಕೆಳಗಿರುವ ತೊಟ್ಟಿಯು ಒಳಮೈಗೆ ಗಾರೆ ಮಾಡಿದೆ. ಆವರಣದೊಳಗೆ ಮೂರು

ಗೋರಿಗಳಿವೆ. ಮಸೀದಿಯ ಆವರಣವ ಬದಿಯಲ್ಲಿ ಪೂರ್ವಕ್ಕೆ ಒಂದು ದೊಡ್ಡ ಬಾವಿಯಿದೆ. ಆಯಾತಾಕಾರದ ಬಾವಿಗೆ ಉತ್ತರ ಮತ್ತು ಪೂರ್ವ ದಿಕ್ಕಿನ ಗೋಡೆಗಳ ಬದಿಯಲ್ಲಿ ಮೆಟ್ಟಿಲುಗಳಿವೆ. ಬಾವಿ ಪ್ರವೇಶ ಉತ್ತರ ದಿಕ್ಕಿನಿಂದ ಇದೆ. ಪಶ್ಚಿಮದಿಕ್ಕಿನ ಗೋಡೆಯ ಮೇಲೆ ನೀರೆತ್ತಲು ಏತದ ವ್ಯವಸ್ಥೆಯಿದೆ. ಬಾವಿಯೊಳಕ್ಕೆ ಚಾಚಿದ ಏತದ ವ್ಯವಸ್ಥೆಯಿದೆ. ಬಾವಿಯೊಳಕ್ಕೆ ಚಾಚಿದ ಏತದ ತೊಲೆಗಳನ್ನು ಎರಡು ಜೊತೆ ಬೊಡಿಗೆಗಳು ಹೊತ್ತಿವೆ. ಕೆಳಗಿನವುಗಳು ಸುರುಳೀಯಾಕಾರದಲ್ಲಿ ಮತ್ತು ಮೇಲಿನವು ಪುಷ್ಪಾಕಾರದಲ್ಲಿವೆ. ಬಾವಿಯನ್ನು ದಪ್ಪ ಕಲ್ಲುಗಳಿಂದ ಕಟ್ಟಿದೆ. ಕೋಟೆ ಬಾಗಿಲ ಪಶ್ಚಿಮಕ್ಕೆ ಮತ್ತೊಂದು ಬಾವಿಯಿದೆ. ಈ ಕೋಟೆಯ ವಾಯುವ್ಯ ಭಾಗದಲ್ಲಿ ವೃತ್ತಾಕಾರದ ಕೊತ್ತಲಗಳಿವೆ. ಬಹುಮನಿ ಮತ್ತು ಆದಿಲ್‌ಶಾಹಿ ಅರಸರ ಕಾಲದಲ್ಲಿ ಇವುಗಳ ನಿರ್ಮಾಣವಾಗಿದೆ.

ಹೊರಕೋಟೆಯ ಒಳಗಿನ ಪ್ರದೇಶದ ದಕ್ಷಿಣಕ್ಕೆ ಬೆಟ್ಟವಿದೆ. ಬೆಟ್ಟವನ್ನು ಸ್ವಲ್ಪ ಹತ್ತಿರದ ಮೇಲೆ ಪೂರ್ವ ಪಶ್ಚಿಮ ದಿಕ್ಕಿನಲ್ಲಿರುವ ಮಧ್ಯದ ಕೋಟೆ ಎದುರಾಗುತ್ತದೆ. ಇದರಲ್ಲಿ ಚೌಕಾಕಾರದ ಕೊತ್ತಲಗಳಿವೆ. ಇದರ ಬಾಗಿಲು ಶಿಥಿಲವಾಗಿದೆ. ಕೋಟೆಯನ್ನು ದಾಟಿ ಒಳಗೆ ಹೋದಾಗ ಒಂದು ದರ್ಗಾ ಇದೆ.

ಹೊರ ಕೋಟೆಯು ಪೂರ್ವ ದಿಕ್ಕಿಗೆ ಬೆಟ್ಟದ ಮೇಲೆ ಉತ್ತರ–ದಕ್ಷಿಣವಾಗಿದೆ. ಈ ಕೋಟೆಯನ್ನು ಮಧ್ಯದ ಗಾತ್ರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಈ ಕೋಟೆಯಲ್ಲಿ ೩ ದಿಡ್ಡಿಗಳಿವೆ. ಇದರ ಕೊತ್ತಲುಗಳು ಚೌಕಾಕಾರ ಮತ್ತು ವೃತ್ತಕಾರದಲ್ಲಿವೆ. ಈಶಾನ್ಯ ಮೂಲೆಯ ಚೌಕಾಕಾರದ ಕೊತ್ತಲಕ್ಕೆ ಸೇರಿದಂತೆ ಕಟ್ಟಿದ ಆಂಜನೇಯನ ದೇವಾಲಯವಿದೆ. ಮುಂದೆ ಚಿಕ್ಕ ದ್ವೀಪ ಸ್ತಂಭವಿದೆ. ಈ ದೇವರನ್ನು ಕೊತ್ತಳದ ಹನುಮಪ್ಪನೆಂದು ಕರೆಯುತ್ತಾರೆ. ದೇವಾಲಯದ ದಕ್ಷಿಣಕ್ಕಿರುವ ವಕ್ರಾಣಿ ಕೆರೆಯ ಅಂಗಳದಲ್ಲಿರುವ ೧೬ನೇ ಶತಮಾನದ ಶಾಸನವು ಸಿಂಗಣನು ಅಂಜನೇಯನನ್ನು ಪ್ರತಿಷ್ಠಾಪಿಸಿ ದೀಪಸ್ತಂಭವನ್ನು ನಿಲ್ಲಿಸಿದನೆಂದು ತಿಳಿಸುತ್ತದೆ.

ಮಧ್ಯದ ಕೋಟೆಯಿಂದ ದಕ್ಷಿಣಕ್ಕೆ ಬೆಟ್ಟ ಹತ್ತುತ್ತ ಮುಂದೆ ಹೋದಾಗ ೩ನೇ ಮತ್ತು ಒಳಕೋಟೆ ಎದರಾಗುತ್ತವೆ. ಬೆಟ್ಟದ ಮೇಲ್ಭಾಗದಲ್ಲಿರುವ ಈ ಕೋಟೆ ಬೆಟ್ಟವನ್ನು ಉತ್ತರ ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಸುತ್ತುವರಿದಿದೆ. ಪೂರ್ವದಿಕ್ಕಿನಲ್ಲಿ ಬೆಟ್ಟ ಕಡಿದಾಗಿರುವುದರಿಂದ ಕೋಟೆಕಟ್ಟುವ ಅವಶ್ಯಕತೆ ಇಲ್ಲ ದಪ್ಪ ಕಲ್ಲಿನಿಂದ ಗಾರೆಯನ್ನು ಬಳಸದೆ ಕಟ್ಟಿದ ಕೋಟೆಯಲ್ಲಿ ಚೌಕಾಕಾರದ ಮತ್ತು ವೃತ್ತಾಕಾರಾದ ಕೊತ್ತಲಗಳಿವೆ. ಕೋಟೆಯ ಬಾಗಿಲು ಶಿಥಿಲವಾಗಿದೆ ಕೋಟೆಯೊಳಗೆ ಎರಡು ಕೊಳಗಳಿವೆ. ನೀರು ಹರಿದು ಬರುವ ತಗ್ಗಾದ ಭಾಗದಲ್ಲಿ ನೀರು ಮುಂದೆ ಹೋಗದಂತೆ ಗೋಡೆ ಕಟ್ಟಿ ಇವುಗಳನ್ನು ನಿರ್ಮಿಸಿದೆ. ಕೊಳಗಳ ಒಳಭಾಗಕ್ಕೆ ಗಾರೆ ಮಾಡಿದೆ. ಕೊಳಗಳ ಹತ್ತಿರ ವೃತ್ತಾಕಾರದ ಒಂದು ಕಣಜವಿದೆ. ಆಗ್ನೇಯ ಮೂಲೆಯಲ್ಲಿ ಬೆಟ್ಟದ ಅತಿಎತ್ತರದವಾದ ಭಾಗದಲ್ಲಿ ಒಂದು ದೊಡ್ಡ ಕಾವಲು ಗೋಪುರವಿದೆ. ಇದಕ್ಕೆ ಪೂರ್ವ ದಿಕ್ಕಿನಲ್ಲಿ ಬಾಗಿಲಿದೆ. ಚೌಕಟ್ಟಿಲ್ಲದ ಬಾಗಿಲಿಗೆ ಸರಳವಾದ ಬೋದಿಗೆಗಳಿವೆ. ದಪ್ಪ ಕಲ್ಲುಗಳಿಂದ ಸಂದಿಗಲಿಲ್ಲದಂತೆ ಈ ಕಟ್ಟಡವನ್ನು ಕಟ್ಟಿದೆ. ಕಟ್ಟಡದ ಮಳಿಗೆ ಮೇಲೆ ಹೋಗಲು ಒಳಗಿನಿಂದ ವಕ್ರಕಾರದಲ್ಲಿ ಮೆಟ್ಟಲುಗಳಿವೆ.

ಮಲ್ಲಟ ಮಾನ್ವಿ ತಾಲೂಕಿನಲ್ಲಿ ಮಾನ್ವಿಯಿಂದ ಉತ್ತರಕ್ಕೆ ೨೦ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬.'೬' ಮತ್ತು ರೇಖಾಂಶ ೭೬ '೫೧'ರಲ್ಲಿದೆ. ಈಗ ಚಿಕ್ಕಗ್ರಾಮವಾಗಿರುವ ಈ ಸ್ಥಳ ಮೊರಟ ಎಂಬ

ಹೆಸರಿನಿಂದ ೧೧-೧೨ನೇ ಶತಮಾನದಲ್ಲಿ ಹೈಹಯರ ರಾಜಧಾನಿಯಾಗಿತ್ತು[೧೭]. ಅಲ್ಲದೆ ಮೊರಟ ೩೦೦ರ ವಿಭಾಗದ ರಾಜಧಾನಿಯೂ ಆಗಿತ್ತು.[೧೮] ಹೈಹಯರ ಅರಸರು ಕಲ್ಯಾಣ ಚಾಲುಕ್ಯರ ಸಮಂತರಾಗಿ ಈ ಭಾಗವನ್ನು ಆಳುತ್ತಿದ್ದರು. ಹೈಹಯ ರೇವರಸನು. ಕ್ರಿ.ಶ.೧೦೫೨ರಲ್ಲಿ ಎಡದೊರೆ ೨೦೦೦ವನ್ನು ಆಳುತ್ತಿದ್ದನು[೧೯]. ಮೊರಟ ೩೦೦ ಪ್ರದೇಶವು ಎಡದೊರೆ ೨೦೦೦ದ ಒಂದು ಉಪವಿಭಾಗವಾಗಿತ್ತು ಅಯ್ಯನದೇವ, ಚಂದರಸ, ಲೋಕರಸ ಬೂಚಿದೇವರಸ ಮುಂತಾದವರು ಈ ವಂಶದ ಅರಸರು[೨]

ಐತಿಹಾಸಿಕ ಮಹತ್ವವುಳ್ಳ ಈ ಊರಿನಲ್ಲಿ ಹೈಹಯ ಕಾಲದಲ್ಲಿ ಕೋಟೆಯಿದ್ದುದು ಇಲ್ಲಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ. ಕೋಟೆಯೊಳಗಿನ ನಾಗರಕೆರೆಯ ದಕ್ಷಿಣ ಭಾಗದಲ್ಲಿ ಪ್ರತಿಷ್ಠಾಪಿಸಿದ ಸೋಮೇಶ್ವರ ದೇವರಿಗೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದನ್ನು ಕ್ರಿ.ಶ.೧೧೪೮ರ ಶಾಸನವು ಉಲ್ಲೇಖಿಸುತ್ತದೆ. ಈ ಕೋಟೆ ಈಗ ಉಳಿದಿಲ್ಲ. ಆದರೆ ಹೈಹಯರ ಕಾಲದ ದೇವಾಲಯಗಳನ್ನು ಇಂದಿಗೂ ಇಲ್ಲಿ ನೋಡಬಹುದು[೬].

ಕೋಟೆಕಲ್ಲು ಇದು ಮಾನ್ವಿ ತಾಲುಕಿನಲ್ಲಿದ್ದು ಇಲ್ಲಿಂದ ವಾಯುವ್ಯಕ್ಕೆ ೪೦ಕಿ.ಮೀ. ದೂರದಲ್ಲಿದೆ. ಇದು ಲಿಂಗಸೂರು ರಾಯಚೂರು ರಸ್ತೆಯಲ್ಲಿ ಲಿಂಗಸೂರುನಿಂದ ಪೂರ್ವಕ್ಕೆ ೧೮ಕಿ.ಮೀ. ದೂರದಲ್ಲಿದೆ. ಈ ಚಿಕ್ಕ ಗ್ರಾಮದಲ್ಲಿ ಕೋಟೆ ಕೊತ್ತಲಗಳು ದೇವಾಲಯಗಳು, ಬಾವಿ, ವೀರಗಲ್ಲು ಮುಂತಾದವುಗಳಿವೆ. ಕೋಟಿಕಲ್ಲಿನ ಇಳಿಜಾರಿನಲ್ಲಿ ಪ್ರಗೈತಿಹಾಸಿಕ ಕಾಲದ ಆಯುಧಗಳು ಮಡಕೆ ಚೂರುಗಳು, ಕಬ್ಬಿಣದ ಕಿಟ್ಟ ಮುಂತಾದವುಗಳ ದೊರತಿವೆ.

ಬೆಟ್ಟದ ಬುಡದಲ್ಲಿರುವ ಊರನ್ನು ಕೋಟೆ ಸುತ್ತುವರಿದಿದೆ. ಪಕ್ಕದ ಬೆಟ್ಟದ ಮೇಲೆಯೆ ಕೋಟೆಯಿದೆ ಊರಿನ ಎತ್ತರಕ್ಕೆ ಮತ್ತು ಪಶ್ಚಿಮದ ಅರ್ಧ ಭಾಗದಲ್ಲಿ ಬೆಟ್ಟವಿರುವುದರಿಂದ ಅಲ್ಲಿ ಹೊರಕೋಟೆಯನ್ನು ಬೆಟ್ಟದ ಮೇಲೆ ಮತ್ತು ಉಳಿದ ಭಾಗದಲ್ಲಿ ನೆಲದ ಮೇಲೆ ಕಟ್ಟಿದೆ. ಬೆಟ್ಟದ ಮೇಲೆ ಒಂದು ಒಳಕೋಟೆಯಿದೆ. ಪೂರ್ವದಿಕ್ಕಿನಲ್ಲಿ ಬಾಗಿಲಿನ ಉತ್ತರ ಭಾಗದ ಕೋಟೆ ಭಾಗಶಃ ಉಳಿದಿದೆ. ಬಾಗಿಲು ಮತ್ತು ಅದರ ಉತ್ತರ ಭಾಗದಲ್ಲಿಯ ಸ್ವಲ್ಪ ಕೋಟೆ ಮಾತ್ರ ಉಳಿದಿದೆ. ಕೋಟೆಗೆ ಪೂರ್ವ ದಿಕ್ಕಿನಲ್ಲಿ ಎರಡು ಪಶ್ಚಿಮ ದಿಕ್ಕಿನಲ್ಲಿ ಒಂದು ಮತ್ತು ಉತ್ತರ ದಿಕ್ಕಿನಲ್ಲಿ ಒಂದು ಬಾಗಿಲುಗಳಿವೆ ಕೋಟೆಗೋಡೆಗೆ ವೃತ್ತಾಕಾರದ ಕೊತ್ತಲುಗಳು ಮತ್ತು ಬೆಟ್ಟದ ಮೇಲೆ ವೃತ್ತಾಕಾರದ ಒಂಟಿ ಕೊತ್ತಲುಗಳು ಇವೆ.

ಪೂರ್ವ ದಿಕ್ಕಿಗಿರುವ ಎರಡು ಬಾಗಿಲುಗಳಲ್ಲಿ ಹೊರಬಾಗಿಲಿನ ಕಟ್ಟಡ ಶಿಥಿಲವಾಗಿದ್ದು ಪ್ರವೇಶ ಮಾತ್ರ ಉಳಿದಿದೆ. ಒಳಬಾಗಿಲಿಗೆ ಚೌಕಟ್ಟು ಛಾವಣಿ ಇಲ್ಲ. ಬಾಗಿಲೊಳಗೆ ಪ್ರವೇಶದ ಬದಿಗಳಲ್ಲಿ ಎತ್ತರವಾದ ಕಟ್ಟೆಗಳಿವೆ. ಪಶ್ಚಿಮ ಮತ್ತು ಉತ್ತರ ದಿಕ್ಕಿನ ಬಾಗಿಲುಗಳಿಗೂ ಚೌಕಟ್ಟು ಛಾವಣಿಗಳಿಲ್ಲ. ಕೋಟೆಗೋಡೆಯನ್ನು ನೈಸರ್ಗಿಕವಾಗಿ ದೊರೆಯುವ ಮಧ್ಯಮ ಗಾತ್ರದ ಮತ್ತು ಚಿಕ್ಕ ಕಲ್ಲುಗಳಿಂದ ಕಟ್ಟಿದೆ. ಈ ಕಲ್ಲುಗಳ ಒಂದು ಅಥವಾ ಎರಡು ಬದಿಗಳನ್ನು ಮಾತ್ರ ಕತ್ತರಿಸಿ ಉಪಯೋಗಿಸಿರುವುದರಿಂದ ಕಲ್ಲುಗಳ ಮಧ್ಯದಲ್ಲಿ ದೊಡ್ಡ ಸಂದಿಗಳಾಗಿವೆ. ಸಂಧಿಗಳಲ್ಲಿ ವಿವಿಧ ಗಾತ್ರದ ಕಲ್ಲಿನ ಚಕ್ಕೆಗಳನ್ನು ಬಳಸಿದೆ. ಗೋಡೆಗಳ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳಿವೆ.

ನೆಲಮಟ್ಟದ ಕೋಟೆಯ ಒಳಗೆ ಜನವಾಸವಾಗಿದ್ದಾರೆ. ಪೂರ್ವ ಬಾಗಿಲಿನ ಹತ್ತಿರ ಬಸವಣ್ಣ ಮತ್ತು ಅಮರಯ್ಯ ದೇವಾಲಯಗಳಿವೆ. ಅಮರಯ್ಯ ಅಥವಾ ಅಮರೇಶ್ವರ ದೇವಾಲಯದ ಎದುರಿಗೆ

ನಂದಿ ಇದೆ. ಕಟ್ಟೆ ಮೇಲಿರುವ ಈ ದೇವಾಲಯದಲ್ಲಿ ಮರದ ಕಂಬಗಳಿವೆ. ಬಸವಣ್ಣನ ದೇವಾಲಯಕ್ಕೆ ಸೇರಿದಂತೆ ಪಕ್ಕದಲ್ಲಿ ಆಂಜನೇಯ್ಯನ ದೇವಾಲಯವಿದೆ. ದೇವಾಲಯದ ಮುಂದೆ ದೀಪಸ್ತಂಭವಿದೆ. ದಕ್ಷಿಣ ಕೋಟೆ ಗೋಡೆಯ ಹತ್ತಿರ ಯಲ್ಲಮ್ಮನ ಗುಡಿ ಮತ್ತು ಪಶ್ಚಿಮ ಬಾಗಿಲಿನ ಹತ್ತಿರ ದ್ಯಾಮವ್ವನ ಗುಡಿ ಇದೆ. ಎತ್ತರ ಕೋಟೆ ಗೋಡೆಯ ಹತ್ತಿರ ಒಂದು ಬಾವಿಯಿದೆ. ಬಾವಿಯ ಪಶ್ಚಿಮಕ್ಕೆ ಒಂದು ಮಸೀದಿ ಇದೆ.

ಬೆಟ್ಟದ ಮೇಲಿನ ಕೋಟೆಯೊಳಗೆ ಅನೇಕ ಕಟ್ಟಡಗಳ ಅವಶೇಷಗಳಿವೆ. ಮೊದಲು ಜನರು ಇಲ್ಲಿ ವಾಸಮಾಡುತ್ತಿದ್ದರು. ನಂತರದಲ್ಲಿ ಬೆಟ್ಟದ ಕೆಳಭಾಗಕ್ಕೆ ಹೋಗಿದ್ದಾರೆ. ಬೆಟ್ಟದ ಮೇಲಿನ ಚೌಕಾಕಾರದ ಒಂದು ಕಟ್ಟಡದಲ್ಲಿ ನೈಸರ್ಗಿಕ ಗುಂಡುಕಲ್ಲನ್ನು ಈರಣ್ಣ ದೇವರೆಂದು ಪೂಜಿಸುತ್ತಾರೆ. ಪಶ್ಚಿಮ ಭಾಗದ ಕೋಟೆಗೋಡೆಯ ಹತ್ತಿರ ಹನುಮಂತನ ಗುಡಿಯಿದೆ. ಬೆಟ್ಟದ ಮೇಲೆ ಕೋಟೆಯ ಒಳಭಾಗದಲ್ಲಿ ಕೋಟೆ ಗೋಡೆಯ ಹತ್ತಿರ ವೃತ್ತಕಾರದ ಒಂದು ಒಂಟಿ ಕೊತ್ತಲವಿದೆ. ಕೋಟೆಯ ಹೊರಗೆ ಈಶಾನ್ಯ ಭಾಗದಲ್ಲಿ ಎತ್ತರದ ಸ್ಥಳಗಳಲ್ಲಿ ವೃತ್ತಾಕಾರದ ಮೂರು ಒಂಟಿ ಕೊತ್ತಲಗಳಿವೆ. ಬೆಟ್ಟದ ಮೇಲೆ ಪಶ್ಚಿಮ ಭಾಗದಲ್ಲಿ ಸಹ ಕಟ್ಟಡಗಳ ಅವಶೇಷಗಳಿವೆ ಇಲ್ಲಿಯೂ ಹಿಂದೆ ಜನರು ವಾಸಿಸುತ್ತಿದ್ದರು.

ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳನ್ನು ಬಳಸಿ ಬಂದೂಕು ಕಿಂಡಿಗಳನ್ನು ಬಿಟ್ಟು ಕಟ್ಟಿರುವ ಈ ಕೋಟೆಯ ಹದಿನೇಳು ಹದಿನೆಂಟನೆಯ ಶತಮಾನದ್ದು

ಕೋಟೆಯ ಹೊರಗೆ ಪಶ್ಚಿಮ ಬಾಗಿಲಿನ ಪಶ್ಚಿಮಕ್ಕೆ ಹೊಲದಲ್ಲಿ ೩ವೀರಗಲ್ಲುಗಳಿವೆ. ಕೋಟೆಯನ್ನು ರಕ್ಷಿಸುವಾಗ ಪ್ರಾಣ ತೆತ್ತವರ ನೆನಪಿಗಾಗಿ ಇವುಗಳನ್ನು ನಿಲ್ಲಿಸಿದೆ. ಒಂದು ವೀರಗಲ್ಲಿನಲ್ಲಿ ಇಬ್ಬರು ವೀರರಿದ್ದಾರೆ. ಮತ್ತೊಬ್ಬನು ಎಡಗೈಯಲ್ಲಿ ಎಡಗೈಯ್ಯಲ್ಲಿ ಉದ್ದವಾದ ಬಂದೂಕನ್ನೂ ಹಿಡಿದಿದ್ದಾನೆ. ೨ನೇ ವೀರಗಲ್ಲಿನಲ್ಲಿರುವ ವೀರನು ಸಹ ಎಡಗೈಯಲ್ಲಿ ಬಂದೂಕನ್ನು ಹಿಡಿದಿದ್ದಾನೆ. ೩ನೇ ವೀರಗಲ್ಲಿನಲ್ಲಿ ಕುದುರೆಯ ಲಗಾಮು ಮತ್ತು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದನೆ.

## ಕುರುಕುಂದ

ಕುರುಕುಂದ ಮಾನ್ವಿ ತಾಲೂಕಿನಲ್ಲಿ ಮಾನ್ವಿಯ ವಾಯುವ್ಯಕ್ಕೆ ೪೫ ಕಿ.ಮೀ. ದೂರದಲ್ಲಿ ಅಕ್ಷಾಂಶ ೧೬° ೧೦' ಮತ್ತು ಉತ್ತರ ರೇಖಾಂಶ ೭೪° ೫೨ ಪೂರ್ವದಲ್ಲಿರುವ ಚಿಕ್ಕಗ್ರಾಮ. ಇಲ್ಲಿ ಕೋಟೆ ದೇವಾಲಯ ಬಾವಿ ಮುಂತಾದವುಗಳಿವೆ.

ಗ್ರಾಮದ ಪಕ್ಕದ ಬೆಟ್ಟದ ಮೇಲೆ ಎರಡು ಸುತ್ತಿನ ಚಿಕ್ಕ ಕೋಟೆಯಿದೆ. ಕೋಟೆಯನ್ನು ಮಧ್ಯಮ ಮತ್ತು ಚಿಕ್ಕಗಾತ್ರದ ಅನಿಯಮಿತಾಕಾರದ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಹೊರ ಕೋಟೆಯಲ್ಲಿ ೩ ವೃತ್ತಾಕಾರದ ಕೊತ್ತಲಗಳಿವೆ. ಈ ಕೋಟೆಗೆ ಉತ್ತರ ದಿಕ್ಕಿನಲ್ಲಿದ್ದ ಬಾಗಿಲು ಶಿಥಲವಾಗಿ ಪಕ್ಕದ ಕೋಟೆಗೋಡೆಯೂ ಬಿದ್ದಿದೆ. ಉತ್ತರ ದಿಕ್ಕಿನ ಗೋಡೆಗೆ ಸೇರಿದಂತೆ ಒಂದು ಕಟ್ಟಡದ ಅವಶೇಷಗಳಿವೆ. ಒಳಕೋಟೆಗೆ ಸೇರಿದಂತೆ ಪಶ್ಚಿಮಕ್ಕೆ ಅರಮನೆಯಂತಹ ದೊಡ್ಡ ಕಟ್ಟಡವಿದೆ. ದರ್ಬಾರ ಎಂದು ಕರೆಯಲಾಗುವ ಈ ಕಟ್ಟಡವನ್ನು ಚಿಕ್ಕ ಕಲ್ಲುಗಳಿಂದ ಗಾರೆಯನ್ನು ಬಳಸದೆ ಕಟ್ಟಿದೆ. ಕಟ್ಟಡವನ್ನು ಎತ್ತರದ ವೇದಿಕೆಯ ಮೇಲೆ ಕಟ್ಟಿದೆ. ವೇದಿಕೆಯ ಪಶ್ಚಿಮ ದಿಕ್ಕಿನಲ್ಲಿ ಪ್ರವೇಶವಿದೆ. ಬಾಗಿಲನ್ನು ಪ್ರವೇಶಿಸಿ

ಬಲಕ್ಕೆ ತಿರುಗಿ ಗೋಡೆ ಮಧ್ಯದಲ್ಲಿ ಹತ್ತುತ್ತ ಮೇಲಕ್ಕೆ ಬಂದು ಎಡಕ್ಕೆ ತಿರುಗಿದಾಗ ಕಟ್ಟಡದ ಒಳಭಾಗವನ್ನು ಸೇರುತ್ತೇವೆ. ಚೌಕಾಕಾರದ ಕಟ್ಟಡದ ಪೂರ್ವ ಗೋಡೆಯಲ್ಲಿ ತೆರೆದ ದೊಡ್ಡ ಕಮಾನಿದೆ. ಕಮಾನಿನಾಕಾರದಲ್ಲಿ ಮತ್ತು ಕೆಳಭಾಗ ಆಯಾತಾಕಾರದಲ್ಲಿ ಇವೆ. ದಕ್ಷಿಣ ಗೋಡೆಯಲ್ಲಿ ಎರಡು ತೆರೆದ ಕಮಾನುಗಳಿವೆ. ಎತ್ತರಗೋಡೆಯಲ್ಲಿ ಕಮಾನುಗಳಿಲ್ಲ. ಕಟ್ಟಡದ ಛಾವಣಿ ಬಿದ್ದುಹೋಗಿದೆ. ಕೋಟೆಯ ಪೂರ್ವಕ್ಕೆ ಮಲ್ಲಿಕಾರ್ಜುನ ದೇವಾಲಯ ಮತ್ತು ಒಂದು ಬಾವಿ ಇದೆ. ಕಲ್ಲಿನಿಂದ ಕಟ್ಟಿ ಗಾರೆ ಮಾಡಿದ ದೇವಾಲಯದ ಕೈಪಿಡಿ ಗೋಡೆಯಲ್ಲಿ ತೆನೆಗಳಿವೆ. ಒಳಗೆ ವೀರಭದ್ರ ಮತ್ತು ಲಿಂಗಗಳಿವೆ. ಮೊದಲು ವೀರಭದ್ರ ಶಿಲ್ಪವನ್ನು ಪ್ರತಿಷ್ಠಾಪಿಸಿ ಅದರ ಮುಂದೆ ಲಿಂಗವನ್ನು ಪ್ರತಿಷ್ಠಾಪಿಸಿಲಾಗಿದೆ. ದೇವಾಲಯದ ಪಕ್ಕದಲ್ಲಿ ಎತ್ತರಕ್ಕೆ ಚೌಕಾಕಾರದ ಬಾವಿಯಿದೆ. ಚೆನ್ನಾಗಿ ಕತ್ತರಿಸಿದ ಚೌಕ ಮತ್ತು ಆಯಾತಾಕಾರದ ಚಿಕ್ಕ ಕಲ್ಲುಗಳಿಂದ ಕಟ್ಟಿದ ಬಾವಿಗೆ ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಮೊದಲು ಉತ್ತರದಿಂದ ದಕ್ಷಿಣಕ್ಕೆ ನಂತರ ಪೂರ್ವದಿಂದ ಪಶ್ಚಿಮಕ್ಕೆ ಕೊನೆಗೆ ಪಶ್ಚಿಮದಿಂದ ಪೂರ್ವಕ್ಕೆ ಇಳಿಯಬೇಕು ಈ ಬಾವಿಯನ್ನು ರಾಜಾ ನೀಲಕಂಠರಾಯ ಬಹದ್ದೂರು ಕ್ರಿ.ಶ.೧೮೬೨ರಲ್ಲಿ ಕಟ್ಟಿದನೆಂದು ಫಲಕದಲ್ಲಿ ಬರೆಯಲಾಗಿದೆ.

ಕೋಟೆಯ ಪೂರ್ವಕ್ಕೆ ಮತ್ತು ಈಶಾನ್ಯಕ್ಕೆ ಬೆಟ್ಟದ ಮೇಲೆ ಎರಡು ವೃತ್ತಾಕಾರದ ಒಂಟಿ ಕೊತ್ತಲಗಳಿದ್ದು ಕೋಟೆಯ ಉತ್ತರಕ್ಕೆ ಶಿಥಲವಾದ ಊರ ಬಾಗಿಲಿದೆ. ಇದು ದಕ್ಷಿಣಕ್ಕೆ ಆಂಜನೇಯ್ಯನ ದೇವಾಲಯವಿದೆ.

ಕಲ್ಲೂರು ಮಾನ್ವಿಯಿಂದ ಈಶ್ಯಾನಕ್ಕೆ ೨೫ಕಿ.ಮೀ. ದೂರಲ್ಲಿ ಅಕ್ಷಾಂಶ ೧೬°೬ ಮತ್ತು ರೇಖಾಂಶ ೭೭° ೮ರಲ್ಲಿದೆ. ಐತಿಹಾಸಿಕ ಪ್ರಸಿದ್ಧವಾದ ಈ ಊರಿನಲ್ಲಿ ಪುರಾತತ್ವ ನೆಲೆ, ದೇವಾಲಯ ಶಿಲ್ಪ ಶಾಸನ ಮುಂತಾದವುಗಳಿವೆ.

ಕಲ್ಲೂರಿನ ಇತಿಹಾಸ ಶಿಲಾ–ತಾಮ್ರಯುಗದಷ್ಟು ಹಿಂದಕ್ಕೆ ಹೋಗುತ್ತದೆ. ಈ ಕಾಲದ ತಾಮ್ರದ ಊರು ಉದ್ದವಾದ ಕತ್ತಿಗಳು ಇಲ್ಲಿ ದೊರೆತಿವೆ[೨೦]. ಕಲ್ಯಾಣ ಚಾಲುಕ್ಯ ಅರಸ ೬ನೇ ವಿಕ್ರಮಾದಿತ್ಯನು ಕ್ರಿ.ಶ.೧೦೯೬ರಲ್ಲಿ ನರ್ಮದಾ ನದಿಯ ದಂಡೆಯ ಮೇಲೆ ಸೈನಿಕ ಶಿಬಿರದಲ್ಲಿದ್ದಾಗ ಪಂಚರಿಗಲ ಕ್ರುತುವನ್ನು ಮಾಡುವ ಸಂದರ್ಭದಲ್ಲಿ[೨೧] ೧೨ನೇ ಶತಮಾನದಲ್ಲಿ ಅಗ್ರಹಾರವಾಗಿ ಬೆಳೆಯಿತು[೨೨].

೧೩–೧೪ನೇ ಶತಮಾನದಲ್ಲಿ ಇಲ್ಲಿ ಒಂದು ಕೋಟೆಯನ್ನು ಕಟ್ಟಲಾಯಿತು ಮುಸ್ಲಿಂ ಅರಸರಕಾಲದಲ್ಲಿ ಈ ಕೋಟೆಗೆ ಐದು ಬಾಗಿಲುಗಳನ್ನು ಕಟ್ಟಲಾಯಿತು. ಇವುಗಳಲ್ಲಿ ೩ ಬಾಗಿಲುಗಳನ್ನು ಅವುಗಳಿಂದ ಹೊರಡುವ ದಾರಿಗಳನ್ನು ಅವಲಂಬಿಸಿ ಮಾನವಿ ದರ್ವಾಜ, ಕಲ್ಮಾಲ ದರ್ವಾಜ ಮತ್ತು ರಾಯಚೂರು ದರ್ವಾಜ ಎಂದು ಹೆಸರಿಡಲಾಗಿದೆ. ಊರಿನಲ್ಲಿ ಚಾವಡಿಯನ್ನು ಕಟ್ಟುವುದಕ್ಕಾಗಿ ರಾಯಚೂರು ದರ್ವಾಜವನ್ನು ಬಳಸಲಾಯಿತು[೨೩]. ಈ ಬಾಗಿಲಿನಲ್ಲಯ ಮರದ ತೊಲೆಯ ಮೇಲಿನ ಶಾಸನದಿಂದ ದಕ್ಷಿಣದ ಈ ಬಾಗಿಲನ್ನು ಮುಸರೆಡಿಯ ಅಗಾಖುಶ್ರುವಿನ ಕಾಲದಲ್ಲಿ ಕ್ರಿ.ಶ.೧೬೮೩ರಲ್ಲಿ ಕಟ್ಟಿಸಿದನೆಂದು ತಿಳಿಯುತ್ತದೆ. ಅಗಾಖುಶ್ರು ಆದಲ್‌ಶಾಹಿ ಅರಸರಾದ ಸಿಕಂದರ ಮತ್ತು ೨ನೇ ಅಲಿ ಅದಿಲ್‌ಶಾಹನ ಅಧಿಕಾರಿಯಾಗಿದ್ದನು. ಕೋಟೆಯ ಅವಶೇಷಗಳು ಉಳಿದಿಲ್ಲ. ಇಲ್ಲಿಯ ದೇವಾಲಯಗಳು[೨೪] ಮಾಹರುಟೇಶ್ವರ ಹಲವುಸಲ ಜೀರ್ಣೋದ್ದಾರಗೊಂಡು ಈಗಲೂ ಸುಸ್ಥಿತಿಯಲ್ಲಿದೆ.

**ಟಿಪ್ಪಣಿಗಳು**

೧. ದೇವರ ಕೊಂಡಾರಡ್ಡಿ – ೨೦೦೩. ರಾಯಾಚೂರು ಜಿಲ್ಲಾ ಶಾಸನ ಸಂಪುಟ ೭ ಪು.ಸಂ. ೨೫೯ & ೨೬೦

೨. ಅದೇ ಸಂಪುಟ ಪು.ಸಂ.–೨೭೫

೩. ಅದೇ ಸಂಪುಟ ಪು.ಸಂ.–೩೩೪ & ೩೩೫

೪. ಅದೇ ಸಂಪುಟ

೫. ಅದೇ ಸಂಪುಟ

೬. ಅದೇ ಸಂಪುಟ

೭. ಅದೇ ಸಂಪುಟ

೮. ಅದೇ ಸಂಪುಟ

೯. ಅದೇ ಸಂಪುಟ

೧೦. ಅದೇ ಸಂಪುಟ

೧೧. ಅದೇ ಸಂಪುಟ

೧೨. ಅದೇ ಸಂಪುಟ

೧೩. ಅದೇ ಸಂಪುಟ

೧೪. ಅದೇ ಸಂಪುಟ

೧೫. ಅದೇ ಸಂಪುಟ

೧೬. ಅದೇ ಸಂಪುಟ

೧೭. ಅದೇ ಸಂಪುಟ

೧೮. ಅದೇ ಸಂಪುಟ

೧೯. ಅದೇ ಸಂಪುಟ

೨೦. ಅದೇ ಸಂಪುಟ

೨೧. ಅದೇ ಸಂಪುಟ

೨೨. ಅದೇ ಸಂಪುಟ

೨೩. ಅದೇ ಸಂಪುಟ

೨೪. ಅದೇ ಸಂಪುಟ

೨೫. ಅದೇ ಸಂಪುಟ

೨೬. ಅದೇ ಸಂಪುಟ



**ಶಾಸನಗಳು**

ಶಾಸನಗಳು ಇತಿಹಾಸದ ಮಹತ್ವಪೂರ್ಣ ದಾಖಲೆಗಳು. ಈ ಭಾಗದ ಇತಿಹಾಸ ರಚನೆಗೆ ಶಾಸನಗಳು ಅಮೂಲ್ಯವಾದ ಆಧಾರಗಳಾಗಿವೆ. ಇತಿಹಾಸ ರಚಿಸುವ ಕೆಲಸವೊಂದೇ ಅಲ್ಲದೆ ಶಾಸನಗಳು ಅಂದಿನ ನಾಗರಿಕ ಜನರ ಬದುಕನ್ನು ಬಿಂಬಿಸಿ ಸಂಸ್ಕೃತಿಯನ್ನು ಎತ್ತಿ ತೋರಿಸುವ ಅದ್ವಿತೀಯ ಹಾಗೂ ಅಪೂರ್ವ ಕೊಡಗೆಗಳಾಗಿವೆ. ನಮಗೆ ತಿಳಿಯದ ಎಷ್ಟೋ ಸಂಗತಿಗಳು ನಮ್ಮ ಹೃದಯವನ್ನು ತಟ್ಟುತ್ತವೆ. ಆಕಾಲದ ಜನರ ರಾಜಕೀಯ ಧಾರ್ಮಿಕ ಆರ್ಥಿಕ, ಸಾಮಾಜಿಕ, ಮೌಲ್ಯಗಳನ್ನು ತಿಳಿಸುತ್ತವೆ. ಈ ತಾಲೂಕಿನಲ್ಲಿ ದೊರೆತಿರುವ ಬಹುತೇಕ ಶಾಸನಗಳು ದಾನಕ್ಕೆ ಸಂಬಂಧ ಪಟ್ಟವುಗಳಾಗಿವೆ.

ಶಾಸನಗಳೆಂದರೇನು? ಉಳಿದ ಬರಹಗಳಿಗೂ ಇವುಗಳಿಗೂ ಇರುವ ವ್ಯತ್ಯಾಸವೇನು? ಈ ಕುರಿತು ಬ್ರಿಟನಿಕಾ ವಿಶ್ವಕೋಶದಲ್ಲಿ ಶಾಸನಗಳನ್ನು ಹೀಗೆ ವಿವರಿಸಿದೆ. ತಾಳೆಗರಿ ಭೂರ್ಜ ಪತ್ರ ಕಾಗದ ಮುಂತಾದವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು ಬಹುಕಾಲ ಉಳಿಯುವ ಸಾಮಾಗ್ರಿಗಳ ಮೇಲೆ ಕೆತ್ತಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು[1].

ಶಾಸನ ಎನ್ನುವ ಪದದ ಮೂಲಾರ್ಥ ಆಜ್ಞೆ, ಕಾಲಾಂತರದಲ್ಲಿ ರಾಜಾಜ್ಞೆ ಎಂಬ ಸಂಕುಚಿತಾರ್ಥ ತಪ್ಪಿಹೋಗಿ ವ್ಯಾಪಾಕಾರ್ಥ ಪಡೆಯಿತು. ದಾನಕ್ಕೆ ಸಂಬಂಧಿಸಿದ, ರಾಜಾಜ್ಞೆಯನ್ನು ಒಳಗೊಂಡಿರದ ಸಂಕೀರ್ಣ ವಿಷಯ ಬರಹಗಳೆಲ್ಲ ಇಂದು ಶಾಸನ ಹೆಸರು ಅನ್ವಯಿಸುತ್ತದೆ. ನಮ್ಮ ನಾಡಿನ ಚಾರಿತ್ರಿಕ ಆಧಾರಗಳ ಅಭಾವ, ಅಸಮರ್ಪಕತೆ, ಅವಿಶ್ವಾಸನೀಯತೆಗಳನ್ನು ಗಮನಿಸಿದಾಗ ಶಾಸನಗಳ ಮಹತ್ವ ಹಾಗೂ ಪ್ರಾಮುಖ್ಯತೆ ತಿಳಿಯುತ್ತದೆ. ಶಾಸನಗಳ ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು. ಚಾರಿತ್ರಿಕ ಉದ್ದೇಶದಿಂದ ಸಂಗತಿಗಳನ್ನು ದಾಖಲಿಸುವ ಸಲುವಾಗಿ ರಚಿತವಾದವುಗಳು. ನಾಡಿನ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು

ಅರ್ಥಮಾಡಿಕೊಳ್ಳುವ ಮೂಲ ಅಥವಾ ನೇರವಾದ ಸಾಮಾಗ್ರಿಗಳು. ರಾಜಕೀಯ ಹಾಗೂ ಸಾಂಸ್ಕೃತಿಕ ಚರಿತ್ರೆಯನ್ನು ಪುನ್ನರಚಿಸುವಲ್ಲಿ ಉಳಿದೆಲ್ಲವುಗಳಿಗಿಂತ ಮಹತ್ತರವಾದ ಮತ್ತು ಅಧಿಕೃತ ದಾಖಲೆಗಳಾಗಿವೆ[1]. ಶಾಸನಕ್ಕೆ ಸಮನಾವಾಗಿ ಬಳಕೆಯಲ್ಲಿರುವ ಆಂಗ್ಲಪದ ``Epigraphy" ಎಂಬ ಪದ ಬಳಕೆಯಲ್ಲಿದೆ. ``Insciption" ಎಂಬ ಪದವು ``Inscibere" ಎಂಬ ಲ್ಯಾಟಿನ್ ಭಾಷೆಯ ಪದದಿಂದ ಬಂದಿದೆ. ಇದರರ್ಥ ಮೇಲೆ ಬರೆ ಎಂಬ ಅರ್ಥವನ್ನು ಕೊಡುತ್ತದೆ. ಹಾಗೆಯೇ ``Epigraphy" ಎಂಬ ಪದವು epi (ಮೇಲೆ) ಮತ್ತು graphic (ಬರೆ, ಸಂಕೇತ) ಎಂಬ ಎರಡು ಗ್ರೀಕ್ ಪದಗಳಿಂದ ಹುಟ್ಟಿಕೊಂಡಿದೆ.

'ಶಾಸನ' ಎಂಬ ಪದ ಸಂಸ್ಕೃತದ 'ಶಾಸ್' ಎಂಬ ಧಾತುವಿನಿಂದ ರೂಪಗೊಂಡಿದೆ. ಅದು ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂಬ ಅರ್ಥ ಉಂಟುಮಾಡುತ್ತದೆ. ಈಗಲೂ ಶಾಸನ ಎಂಬ ಪದಕ್ಕೆ ಕಾನೂನು ಎಂಬ ಅರ್ಥವೂ ಪ್ರಚಲಿತವಿದೆ.

ಶಾಸನವೆಂದರೆ ರಾಜಾಜ್ಞೆ ಅದನ್ನು ಎಲ್ಲ ಪ್ರಜೆಗಳು ಪಾಲಿಸಬೇಕಾಗುತ್ತಿತ್ತು. ಇಲ್ಲದಿದ್ದರೆ ರಾಜನ ದಂಡನೆಗೆ ಗುರಿಯಾಗಬೇಕಾಗುತ್ತಿತ್ತು. ರಾಜನು ತಾನು ಕೊಟ್ಟ ದಾನದ ವಿಷಯವಾಗಿಯೂ ಮಾಡಿದ ಧರ್ಮಕಾರ್ಯದ ಬಗ್ಗೆಯೇ ಆಜ್ಞಾಪ್ತಿಯನ್ನು ಹೊರಡಿಸುತ್ತಿದ್ದನು. ಶಾಸನ ಎಂಬ ಶಬ್ದಕ್ಕೆ ಧರ್ಮಲಿಪಿ ಮುಂತಾದ ಅರ್ಥಗಳು ಹುಟ್ಟಿವೆ. ಅಶೋಕನೆ ತನ್ನ ಶಾಸನಗಳನ್ನು 'ಧರ್ಮಲಿಪಿಗಳೆಂದು ಹೇಳಿಕೊಂಡಿದ್ದಾನೆ. ಇಂದು ಶಾಸನ ಎಂಬ ಶಬ್ದವನ್ನು ನಾವು ಕಲ್ಲು ಮುಂತಾದ ವಸ್ತುಗಳ ಮೇಲೆ ಕೊರೆದದ್ದು ಎಂಬುದರ ಸಮಾನಾರ್ಥವಾಗಿದೆ. ಅದು ಇಂಗ್ಲೀಷ ಭಾಷೆಯಲ್ಲಿರುವ Inscription ಎಂಬುದರ ಸಮನಾರ್ಥಕವಾಗಿದೆ. Inscribe ಎಂದರೆ ಅಕ್ಷರಗಳನ್ನು ಕೆತ್ತು, ಕಂಡರಿಸು ಎಂದು ಅರ್ಥ.[2]

ಪ್ರಾರಂಭದಲೆಲ್ಲ ಶಾಸನಗಳನ್ನು ದೊಡ್ಡ ದೊಡ್ಡ ಬಂಡೆಗಲ್ಲುಗಳ ಮೇಲೆ ಬರೆಸುತ್ತಿದ್ದರು. ಅನಂತರ ಶಾಸನ ಬರೆಯುವ ಕಲ್ಲನ್ನು ಒಂದು ಆಕಾರಕ್ಕೆ ತಂದು ಆ ಕಲ್ಲನ್ನು ಬರೆಯಲು ಉಪಯೋಗಿಸುತ್ತಿದ್ದರು. ಬರೆಯುವ ವಿಷಯ ಹೆಚ್ಚಾದಂತೆಲ್ಲಾ ಅದರ ವಿಸ್ತಾರವೂ ಹೆಚ್ಚುತ್ತಾ ಹೋಯಿತು. "ಭಾರತದಲ್ಲಿ ಇದುವರೆಗೆ ದೊರೆತಿರುವ ಅತಿ ಪ್ರಾಚೀನ ಶಾಸನಗಳೆಂದರೆ ಅಶೋಕನ ಕ್ರಿ.ಪೂ.೩ನೇ ಶತಮಾನದ ಶಾಸನಗಳೆಂದು ತಿಳಿದುಬರುತ್ತದೆ. ಅವು ಪ್ರಾಕೃತ ಭಾಷೆಯಲ್ಲಿವೆ. ಶಾಸನಗಳ ಭಾಷೆಯನ್ನು ಗಮನದಲ್ಲಿಟ್ಟು ಹೇಳುವುದಾದರೆ ಆರಂಭದಲ್ಲಿ ಪ್ರಾಕೃತ ಭಾಷೆಯು ರಾಜಮಾನ್ಯವಾಗಿತೆಂದು ಕಾಣವುದು. ಕ್ರಿ.ಶ. ೧ನೇ ಶತಮಾನದ ಅಂತ್ಯಭಾಗದಿಂದ ನಮಗೆ ಸಂಸ್ಕೃತ ಭಾಷೆಯ ಶಾಸನಗಳು ದೊರೆಯುತ್ತವೆ. ಕಾಲಾನುಕ್ರಮದಲ್ಲಿ ಸಂಸ್ಕೃತ ಭಾಷೆಯು ಪ್ರಾಕೃತ ಭಾಷೆಯನ್ನು ಹಿಂದಕ್ಕೆ ತಳ್ಳಿ ರಾಜಭಾಷಾ ಮಾರ್ಯದೆಯನ್ನು ಹೊಂದಿತೆನ್ನಬಹುದು. ಪ್ರಾರಂಭ ಕಾಲದ ಸಂಸ್ಕೃತ ಶಾಸನಗಳು ತುಂಬಾ ಸರಳವಾಗಿದಲ್ಲಿ ಅನಂತರ ಕಾವ್ಯಗಳಲ್ಲಿರುವಂತೆ ಪಾಂಡಿತ್ಯಪೂರ್ಣವಾಗಿ ಶೋಭಿಸುಹತ್ತಿದವು[3]. ಶುಕ್ರಚಾರ್ಯರ 'ಶುಕ್ರ ನೀತಿ ಸಾರದಲ್ಲಿ' ರಾಜಶಾಸನ ಪ್ರಭೇದಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದೆ. ಅದರ ಪ್ರಕಾರ "ಶಾಸನ ಪತ್ರದಲ್ಲಿ ರಾಜನ ಸ್ವಂತ ರುಜುವೂ ಆ ಆಜ್ಞೆ ಹೊರಟ ದಿನಾಂಕವೂ

ಇರಬೇಕು ಮತ್ತು ಹೀಗೆ ಆರಂಭವಾಗಬೇಕು. ನೀವೆಲ್ಲ ಕೇಳರಿ, ನೀವೆಲ್ಲ ಹೀಗೆ ಹೀಗೆ ಮಾಡಬೇಕು ಮತ್ತು ಈ ಆಜ್ಞೆಯಂತೆ ನಡೆದುಕೊಳ್ಳಬೇಕು ಇತ್ಯಾದಿಯಾಗಿ ಪಟ್ಟಿಯನ್ನು ಕೊಡುತ್ತಾನೆ. ಇನ್ನೂ ಮುಂದುವರೆದು ಲೇಖನವಿಲ್ಲದೆ ಆಜ್ಞೆ ಮಾಡುವ ರಾಜ ಇಂತಹ ಆಜ್ಞಾಪತ್ರಗಳಿಲ್ಲದೆ ಅಧಿಕಾರವನ್ನು ಪ್ರಯೋಗಿಸುವ ಅಧಿಕಾರಿಗಳಿಬ್ಬರು ಚೋರರು; ರಾಜ ಮುದ್ರ ಸಹಿತವಾದ ಶಾಸನವೇ ನಿಜವಾದ ರಾಜ. ಬರಿಯ ರಾಜ ರಾಜನೇ ಅಲ್ಲ ಶಾಸನಗಳಿಗೆ ಎಂದರೆ ಆಜ್ಞೆಗಳಿಗೆ ಶುಕ್ರಾಚಾರ್ಯರು ಕೊಟ್ಟಿದ್ದ ಮಹತ್ವ ಇವರಿಂದ ಉದಿತವಾಗುತ್ತದೆ.[೨]

ಹೀಗೆ ರಾಜರಿಂದ ರೂಪಪಡೆದು ಜನರಿಗಾಗಿ ಹಲವಾರು ವಿಧಿ–ವಿಧಾನ ಕಟ್ಟಳೆಗಳನ್ನು ಹೊರಡಿಸುತ್ತಾ ಕಾಲ ಗತಿಸಿದಂತೆಲ್ಲ ಸಂಕುಚಿತ ಅರ್ಥದಿಂದ ವಿಶಾಲ ಅರ್ಥವನ್ನು ಪಡೆದುಕೊಳ್ಳುತ್ತಾ ಜನರ ಜೀವನ ಸಾಂಸ್ಕೃತಿಕ ವಿಧಾನವನ್ನು ರಾಜರ ಆಡಳಿತ ಇಸ್ವಿ ಮುಂತಾದವುಗಳ ಮಾಹಿತಿಯನ್ನು ಚಿತ್ರಿಸುತ್ತ ಬಂದ ಮಹತ್ವದ ಲಿಖಿತ ರೂಪದ ದಾಖಲೆಗಳಾಗಿವೆ.

ಮಾನ್ವಿ ತಾಲೂಕಿನಲ್ಲಿ ಒಟ್ಟು ಶಾಸನಗಳು ದೊರಕಿದ್ದು ಇವುಗಳಲ್ಲಿ ಬಾವಿ, ಕೆರೆ ಕಟ್ಟಿಸಲು ಭೂಮಿಯನ್ನು ದಾನ ಬಿಟ್ಟಿರುವುದು. ದೇವಾಲಯನ್ನು ಕಟ್ಟಿಸಿ ಭೂಮಿ ಗಾಣ, ನಿವೇಶನಗಳನ್ನು ಕೊಟ್ಟಿರುವ ವಿಷಯ, ಜನರಿಗೆ ಕಟ್ಟಳೆಗಳನ್ನು ವಿಧಿಸಿರುವುದು, ಭೂಮಿಯ ಮೇರೆಗಳನ್ನು ತಿಳಿಸುತ್ತದೆ. ಇದಲ್ಲದೆ ಮಂಡಳಿಕರು ದಂಡನಾಯಕರು ತಮ್ಮ ರಾಜನಿಗೆ ಒಳ್ಳೆಯದಾಗಲೆಂದು, ತಂದೆಗೆ ಒಳ್ಳೆಯದಾಗಲೆಂದು ದೇವಾಲಯಗಳನ್ನು ಕಟ್ಟಿಸಿರುವ ವಿಷಯವಲ್ಲದೆ ಇನ್ನು ಅನೇಕ ವಿಷಯಗಳು ಶಾಸನಗಳಿಂದ ತಿಳಿದು ಬರುತ್ತದೆ.

## ೪.೧. ದಾನ ಶಾಸನಗಳು

ಭಾರತೀಯ ಸಂಸ್ಕೃತಿಯನ್ನು ಅಧ್ಯಯ ಮಾಡುವವರಿಗೆ ಸಾಹಿತ್ಯದಂತೆಯೇ ಶಾಸನಗಳೂ ವಿಷಯದ ಗಣಿಯಾಗಿವೆ. "ಶಾಸನಗಳು ನಮ್ಮ ನಾಡಿನ ಅಪೂರ್ವವಾದ ಸಂಪತ್ತು" ಎಂದು ಡಾ.ಪಿ.ಬಿ.ದೇಸಾಯಿ ಅವರು ಹೇಳುತ್ತಾರೆ. "ಶಾಸನಗಳು ಸಾಹಿತ್ಯದ ತಲಕಾವೇರಿ" ಎಂದು ಡಾ.ಎಂ.ಚಿದಾನಂದ ಮೂರ್ತಿಯವರು ಹೇಳುತ್ತಾ ಕನ್ನಡ ನಾಡಿನ ಜೀವನವು ಎಲ್ಲಿಯೂ ಯಾವ ಗ್ರಂಥಗಳಲ್ಲಿಯೂ ಮಡುಗಟ್ಟಿ ನಿಂತಿಲ್ಲ. ಅದು ಕೆಲವು ಕಾವ್ಯಗಳಲ್ಲಿ ಅಲ್ಲಲ್ಲಿ ಗೋಪಾದ ಜಲದಂತೆ ಕಂಡು ಬಂದರೂ ಹೆಚ್ಚು ಪ್ರಾಮಾಣದಲ್ಲಿ ಹೆಚ್ಚು ವಿಸ್ತಾರವಾಗಿ ಹೆಚ್ಚು ಶುದ್ಧರೂಪದಲ್ಲಿ ಕಾಣಿಸಿಕೊಳ್ಳುವುದು ಶಾಸನಗಳಲ್ಲಿ ಎಂದಿದ್ದಾರೆ.[೬]

ಪ್ರಾಚೀನ ಕರ್ನಾಟಕದಲ್ಲಿ ಜನಜೀವನದ ಆದರ್ಶಗಳಾಗಿದ್ದ ಅವರ ಬಾಳನ್ನು ಹಿಡಿದು ನಡೆಸಿದ ಮೌಲ್ಯಗಳೆಂದರೆ, ವೀರತ್ವ ಮತ್ತೊಂದು. ೧೦ನೇ ಶತಮಾನದಿಂದಚೆಗೆ ಅಚ್ಚುಕಟ್ಟಾದ ದಾನ ರೂಪದ ಶಾಸನಗಳನ್ನು ಕಾಣಬಹುದು. ಇವುಗಳ ವಿಷಯ ನಿರೂಪಣೆಯಲ್ಲಿ ದಾನದ ವಸ್ತು ಮತ್ತು ಉದ್ದೇಶಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ದಾನ ಕೊಡುವುದು ದೇವಾಸ್ಥಾನಗಳಿಗೆ, ಮಠಗಳಿಗೆ, ವಿದ್ವಾಂಸರಿಗೆ, ಗುರುಗಳಿಗೆ, ಹೊಲದ ರೂಪದಲ್ಲಿ ಹಣವನ್ನು ಇಲ್ಲವೆ ಮನೆಯ ರೂಪದಲ್ಲಿ ಆದಾಯದ ಒಂದು

ಭಾಗವನ್ನು ಸುಗಮವಾಗಿ ಸಾಗಲೆಂದು ಇವೆಲ್ಲವನ್ನು ನೀಡುತ್ತಿದ್ದರು. ಈ ವಿಷಯವನ್ನು ಕುರಿತು ಹೇಳುವ ಶಾಸನ ಎಂಬ ಮಾತನ್ನು 'ದಾನ' ಎನ್ನುವ ಅರ್ಥದಲ್ಲಿಯೇ ಬಳಸಲಾಗಿದೆ. ಕೆರೆ, ಬಾವಿಗಳಿಗೆ ದಾನ ನೀಡಿದ ವಿವರಗಳೂ ಕೂಡಾ ಶಾಸನದಲ್ಲಿ ದೊರೆಕುತ್ತವೆ.

"ಶಾಸನಗಳನ್ನು ಹಾಕಿಸಲು ಅನೇಕ ಉದ್ದೇಶ ಕಾರಣಗಳು ಇದ್ದಂತೆ ಕಂಡುಬರುತ್ತದೆ. ಮೊದಲನೆಯದಾಗಿ ದಾನವನ್ನು ಕೊಡುವ ವ್ಯಕ್ತಿಯು ಉದಾರದೃಷ್ಟಿ ತಾನು ಕೊಟ್ಟಿರುವ ದಾನವು ಇಷ್ಟಕ್ಕೆ ನಿಲ್ಲಬಾರದು, ದಾನವನ್ನು ಸ್ವೀಕರಿಸುವವನ ಮಕ್ಕಳು, ಮೊಮ್ಮಕ್ಕಳು, ಅನೂಚಾನವಾಗಿ ಅನುಭವಿಸಿಕೊಂಡು ಬರಬೇಕು. ಎಂಬುವುದೇ ಶಾಸನಗಳನ್ನು ಹಾಕಿಸುವುದರ ಪ್ರಧಾನ ಉದ್ದೇಶ "ಎರಡನೆಯ ಪ್ರಮುಖವಾದ ಪ್ರಚೋಧನೆಯೆಂದರೆ ತನ್ನ ಹೆಸರು ಶಾಶ್ವತವಾಗಿ ನಿಲ್ಲಬೇಕೆಂಬ ಮಾನವ ಸಹಜವಾದ ಪ್ರಾವೃತ್ತಿ"[೭] ಈ ಪ್ರವೃತ್ತಿ ಹಿನ್ನೆಲೆಯಾಗಿ ಮಾನ್ವಿ ತಾಲೂಕಿನಲ್ಲಿ ದೊರೆತಿರುವ ಶಾಸನಗಳ ಮೂಲಕ ಮೇಲಿನ ಎಲ್ಲ ಅಂಶಗಳು ವ್ಯಕ್ತವಾಗಿರುವುದನ್ನು ಕಂಡುಕೊಳ್ಳಬಹುದು.

ಕುರುಡಿ ಗ್ರಾಮದ ಮಠದ ಎದುರಿನ ವೀರಗಲ್ಲಿನ ಮೇಲೆ ಶಕವರ್ಷ ೭೮೪ ಎಂದು ಕಾಲದ ಉಲ್ಲೇಖ[೮] ಮಾತ್ರ ತಿಳಿಸುತ್ತದೆ. ಅದೇ ರೀತಿಯಾಗಿ ಬಾಗಲವಡ ಗ್ರಾಮದ ಹೊರಭಾಗದಲ್ಲಿ ನಿಲ್ಲಿಸಿರುವ ಕಲ್ಲಿನ ಶಾಸನದಲ್ಲಿ ಶಕವರ್ಷ (ಕ್ರಿ.ಶ.೮೭೪) ೮೦೦, ರಕ್ತಾಕ್ಷಿ, ಅಮಾವಾಸ್ಯೆ[೯] ಎಂದು ಮಾತ್ರ ವಿವಿಕ ದೊರಕುತ್ತದೆ. ಉಳಿದ ವಿವರಗಳು ಅಸ್ಪಷ್ಟವಾಗಿವೆ.

"ಬಲ್ಲಟಗಿ ಗ್ರಾಮದ ಅಗಸಿಯ ಕಟ್ಟೆಯ ಸಮೀಪದಲ್ಲಿ ನಿಲ್ಲಿಸಿರುವ ಕಲ್ಲಿನ ಶಾಸನವು ಚಾಲುಕ್ಯ ಎರಡನೆಯ ಜಯಸಿಂಹನ ಕ್ರಿ.ಶ.೧೦೨೨ ಕಾಲದ್ದಾಗಿದ್ದೆ[೧೦] ಪುವ್ವರವಳ್ಳಿ ನೆಲೆಬೀಡಿನಿಂದ ಈತನ ರಾಣಿ ಮಹಾದೇವಿಯು ಬಳ್ಳನಿಟ್ಟಗೆಯಲ್ಲಿ ತಂತ್ರಪಾಳ ಮಲ್ಲಯ್ಯ ಪ್ರತಿಸ್ಥಾಪಿಸಿದ ತ್ರೈಪುರುಷ ದೇವಾಲಯಕ್ಕೆ ಅಯ್ಯಣವಾಡಿ ೩೦೦ ಮನ್ನೆಯ ಲೋಕಾದಿತ್ಯನಿಂದ ಭೂಮಿಯನ್ನು ಪಡೆದು ದೇವಾಲಯಕ್ಕೆ ದಾನ ನೀಡುತ್ತಾಳೆ.

ಬಲ್ಲಟಗಿ ಗ್ರಾಮದ ಮಸೀದಿ ಸಮೀಪ ಒಡೆದ ಕಲ್ಲಿನ ಮೇಲೆ ಕ್ರಿ.ಶ. ೧೦೨೮ರ ಉಲ್ಲೇಖವಿದೆ.[೧೧] ಎಡದೊರೆ ೨೦೦೦ದ ಬಳ್ಳನಿಟ್ಟಗೆಯಲ್ಲಿ ಹೆಗ್ಗಡೆ ಕಕ್ಕಪಯ್ಯನು ವಿಷ್ಣುದೇವಾಲಯವನ್ನು ಕಟ್ಟಿಸಿದಾಗ ಇದಕ್ಕೆ ಚಾಲುಕ್ಯರಸ ಜಗದೇಕಮಲ್ಲನ ರಾಣಿ ಸೋಮಲದೇವಿಯು ಭೂಮಿಯನ್ನು ದಾನ ಮಾಡುವಳು. ಬಳ್ಳನಿಟ್ಟಗೆ ಎನ್ನವು ಈ ಗ್ರಾಮದ ಹೆಸರು ಬರುಬರುತ್ತಾ ಜನರಾಡುವ ಭಾಷೆಯಲ್ಲಿ ಇಂದು ಬಲ್ಲಟಗಿ ಎಂದು ಗುರುತಿಸಿಕೊಂಡಿದೆ. 'ಎ' ಕಾರಾಂತ ಅಕ್ಷರದಿಂದ ಕೊನೆಗೊಂಡು 'ಇ' ಕಾರಾಂತವಾಗಿ ಪರಿವರ್ತನೆಗೊಂಡಿದೆ.

ಇದೇ ಗ್ರಾಮದ ಶಾಲೆಯ ಸಮೀಪಪಿರುವ ಕಲ್ಲಿನ ಮೇಲೆ ಕ್ರಿ.ಶ.೧೦೨೯ ಉಲ್ಲೇಖವಿದೆ. ಪ್ರಾರಂಭದ ಕೆಲವು ಸಾಲುಗಳ ಅಕ್ಷರಗಳು ಅಷ್ಪಷ್ಟವಾಗಿದ್ದು ಪಂದಿರ್ಕೆಯ ನೆಲೆವೀಡಿನಲ್ಲಿದ್ದ ಜಗದೇಕಮಲ್ಲನ ರಾಣಿ ಸೋಮಲದೇವಿಯು ಎಡದೊರೆ ನಾಡಿನ ಛತ್ರಗ್ರಾಮದವಾದ ಬಳ್ಳನಿಟ್ಟಗೆಯಲ್ಲಿರುವಲ್ಲಿ ಜೈನ ಬಸದಿಗೆ ಕಂಮತದೊಳಗೆ ಪಿರಿಯಕೋಲಲಿ ೨೪ ಮತ್ತರು ಕರಿಯ

ನೆಲ, ತೋಟ, ಮನೆ, ಗಾಣವನ್ನು ದಾನ ಕೊಟ್ಟ ವಿಷಯ ತಿಳಿದುಬರುತ್ತದೆ. ಇದೇ ಗ್ರಾಮದ ದಂಡಮಾಗಿ ಎಂಬ ಸ್ಥಳದಲ್ಲಿ ಬಿದಿರುವ ಶಾಸನದಲ್ಲಿ ಕ್ರಿ.ಶ.೧೦೩೧ರ ಉಲ್ಲೇಖವಿದೆ.[೧೩] ಏತಗಿರಿ (ಈಗಿನ ಯಾದಗಿರಿ) ನೆಲೆವೀಡಿನಲ್ಲಿದ್ದಾಗ ಮಾನ್ವಿ ತಾಲುಕಿನ ಗಡಿ ಭಾಗದ ಸಿಂಧನೂರಿನ ದಿಗ್ಗಿಗೆಯ ಮಧುಸೂಧನ ಭಟರಿಗೆ ಮಾನ್ವಿತಾಲೂಕಿನ ಬಳ್ಳನಿಟ್ಟಗೆಯಲ್ಲಿ ಪಿರಿಯ ಕೋಲಲ್ಲಿ ನೂರು ಮತ್ತರು ಭೂಮಿ ಮತ್ತು ಇದರೊಂದಿಗೆ ೧೦ ಕೈಯ್ಯ ಅಳತೆಯ ಮನೆಯ ನಿವೇಶನವನ್ನು ಸೋಮಲದೇವಿ ದಾನವಾಗಿ ನೀಡುತ್ತಾಳೆ. ದಿಗ್ಗಗೆ ಎನ್ನುವ ಸಿಂಧನೂರು ತಾಲೂಕಿನ ಗಡಿ ಗ್ರಾಮ ಇಂದು ಇದನ್ನು 'ದಿದ್ದಿಗೆ' ಎಂದು ಕರೆಯುತ್ತಾರೆ. ಹಳ್ಳದ ದಂಡಿಗೆ ಈಗ್ರಾಮವಿದೆ. ಈ ಹಳ್ಳ ಮುಂದೆ ಹರಿದಂತೆಲ್ಲಾ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಈ ಗ್ರಾಮದ ವೀರಭದ್ರೇಶ್ವರ ದೇವಾಲಯದೊಳಗ ಶಾಸನವೊಂದನ್ನು ಒಳಗೋಡೆಗೆ ಸೇರಿಸಲಾಗಿದೆ.

ತಡಕಲ್ ಗ್ರಾಮದ ಅಗಸಿಯ ಗೋಡೆಗೆ ಸೇರಿಸಿರುವ ಕಲ್ಲಿನಲ್ಲಿ ಕ್ರಿ.ಶ.೧೦೩೩ರ ಉಲ್ಲೇಖವಿದೆ[೧೪]. (ಪುಟ ೨೩೮) ಜಗದೇಕಮಲ್ಲನ ಮತ್ತೊಬ್ಬ ರಾಣಿಯಾದ ಬಿಜ್ಜಲದೇವಿಯು ಏತಗಿರಿಯ (ಯಾದರಿಗಿ) ನೆಲೆವೀಡಿನಿಂದ ಅಗ್ರಹಾರ ತಡಕಲ್ಲಿನ ದೇವಾಲಯವೊಂದಕ್ಕೆ ಸೂರ್ಯಗ್ರಹಣದ ದಿನ ಭೂದಾನ ಮಾಡಿರುವುದು ತಿಳಿದುಬರುತ್ತದೆ.

ನುಗುಡೋಣಿ ಗ್ರಾಮದ ಮಣ್ಣಪ್ಪನ ಹೊಲದಲ್ಲಿರುವ ಕಲ್ಲಿನ ಮೇಲೆ ಕ್ರಿ.ಶ.೧೦೩೬ರ ಉಲ್ಲೇಖವಿದೆ ಪೊಟ್ಟಳಕೆರೆ ನೆಲೆವೀಡಿನಲ್ಲಿದ್ದ ರಾಣಿ ಸೋಮಲದೇವಿಯ ಜಯ, ಚಂಡರತಿ, ಮಾರಬೆಯ ಕೋರಿಕೆಯ ಮೇರೆಗೆ ಎಡದೊರೆ ನಾಡಿನ ಮೊಸಳಿಕಲ್ಲು-೩೦೦ರ ಭತ್ತಗ್ರಾಮ ಒಳ್ಳನಿಟ್ಟಗೆಯ ಬಂಕೇಶ್ವರ ದೇವರಿಗೆ ತೋಟ ಗಾಣ ಮೊದಲಾವುಗಳನ್ನು **ಗೋಕರ್ಣರಾಸಿಜೀಯರಿಗೆ** ದಾನ ಕೊಟ್ಟಿರುವುದು ತಿಳಿಯುತ್ತದೆ.

ಚಿಲ್ಲಟಗಿ ಗ್ರಾಮದ ಪೈಕಾರ ಎಂಬ ಬಾವಿಯ ಸಮೀಪದ ಕಲ್ಲಿನ ಮೇಲೆ ಕ್ರಿ.ಶ. ೧೦೩೬ರ ಉಲ್ಲೇಖವಿದೆ[೧೫] ಜಗದೇಕಮಲ್ಲನು ಪೊಟ್ಟಳಕೆರೆ ನೆಲೆವೀಡಿನಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಎಡದೊರೆ ೨೦೦೦ರ ಕಂಪಣ, ಮೊಸಳಿಕಲ್ಲ-೩೦೦ರ ಭತ್ತಗ್ರಾಮವಾಗಿದ್ದ ಈ ಬಲ್ಲಟಗಿಯ ಚಂದೇಶ್ವರ ದೇವಾಲಯಕ್ಕೆ ದಾನ ನೀಡಿರುವುದನ್ನು ತಿಳಿಸುವುದರ ಜೊತೆಗೆ ವಾದಿ ಗಜಕೇಸರಿ ಸದ್ಯೋಜಾತ ಎಂಬ ವ್ಯಕ್ತಿ ಈ ದೇವಾಲಯದಲ್ಲಿ ಸ್ಥಾನಾಚಾರ್ಯನಾಗಿದ್ದಂತೆ ತಿಳಿದುಬರುತ್ತದೆ. ಒಂದೇ ವರ್ಷದಲ್ಲಿ ಅಕ್ಕಪಕ್ಕದ ಊರುಗಳಾದ ಈ ಗ್ರಾಮಗಳಲ್ಲಿ ರಾಣಿ ಸೋಮಲದೇವಿ ಮತ್ತು ಜಗದೇಕಮಲ್ಲ ಇಬ್ಬರು ಹಾಕಿಸಿರುವ ಶಾಸನಗಳ ಮೂಲಕ ದಾನ ಕೊಟ್ಟ ವಿಚಾರ ತಿಳಿದು ಬರುತ್ತದೆ. ಶಾಸನಗಳಲ್ಲಿರುವ ಮೊಸಳಿಕಲ್ಲು ಗ್ರಾಮವು ಇಂದು ಜನರಾಡುವ ಮೊಸರಕಲ್ಲು ಎಂದಾಗಿದೆ. ಇದು ಈಗ ದೇವದುರ್ಗ ತಾಲೂಕಿನಲ್ಲಿದೆ.

ಜಗದೇಕಮಲ್ಲನ ತರುವಾಯ ಆಳ್ವಿಕೆ ಮಾಡಿದವನು ತ್ರೈಲೋಕ್ಯಮಲ್ಲ. ಈತನಿಗೆ ೧ನೇ ಸೋಮೇಶ್ವರ ಎಂದು ಕೂಡ ಕರೆಯುತ್ತಾರೆ. ಈತನ ಆಳ್ವಿಕೆ ಕಾಲದ ಶಾಸನಗಳು ಈ ಭಾಗದಲ್ಲಿ ದೊರೆತಿದ್ದು ಇದರಿಂದ ಹಲವಾರು ವಿಷಯಗಳನ್ನು ತಿಳಿಯಲು ಸಹಾಯಕವಾಗಿವೆ. ಬಾಗಲವಾಡದ ಶಾಸನದಲ್ಲಿ

“ಕ್ರಿ.ಶ.೧೦೫೩ರ”[೧೭] ತ್ರೈಲೋಕ್ಯಮಲ್ಲನ ರಾಣಿ (ಹೆಸರು ಹಾಳಾಗಿದೆ) ಧರ್ಮದ ಪತ್ರಕ್ಕೆ ದಾನ ನೀಡಿರುವುದನ್ನು ಈ ಶಾಸನ ತಿಳಿಸುತ್ತದೆ. ಈತನ ರಾಣಿ ಚಾಮಲ ವಿಷಯವು ಬಲ್ಲಟಗಿಯ ಶರಣಪ್ಪನ ಹೊಲದಲ್ಲಿರುವ ಶಾಸನದ  ಮೂಲಕ ತಿಳಿದು ಬರುತ್ತದೆ. “ಕ್ರಿ.ಶ.೧೦೫೮ರ”[೧೮] ಕಾಲವನ್ನು ಸೂಚಿಸುತ್ತದೆ. ಈಕೆಯು ಮಾಲೆಯ (ಮಾಳಾಪು)ದಲ್ಲಿದ್ದಾಗ ತುಂಗಭದ್ರ ಮತ್ತು ಕೃಷ್ಣ ನದಿಯ ಸಂಗಮದಲ್ಲಿ ಸ್ನಾನಮಾಡಿದ ನೆನಪಿಗಾಗಿ ಬಲ್ಲಟಗಿಯಲ್ಲಿ ದಾನ ಬಿಡುತ್ತಾಳೆ. ಇದನ್ನು ಶಿವಪಾದ ಪಂಕಜಭ್ರಿಮರನೆನಿಸಿದ ಭಾಸ್ಕರ ಸೆಟ್ಟಿಯ ನೀಡಿರುವುದನ್ನು ತಿಳಿಸುತ್ತದೆ.

ಕಪ್ಪಗಲ್ಲು ಈಶ್ವರ ಗುಡಿಯ ಹತ್ತಿರ ಬಾವಿಯ ಸಮೀಪದ ಕಲ್ಲಿನ ಮೇಲೆ ಕ್ರಿ.ಶ.೧೦೬೯ರ ಉಲ್ಲೇಖವಿದೆ[೧೯] ಈ ಶಾಸನದಲ್ಲಿ ಈತನಿಗೆ ಭುವನೈಕ್ಯಮಲ್ಲ ಎಂದು ಕರೆಯಲಾಗಿದೆ. ಈತನು ಕೆರೆಯೂರು ನೆಲೆವೀಡಿನಿಂದ ಆಳ್ವಿಕೆ ಮಾಡುತ್ತಿದ್ದಾಗ ಇವನ ಹೆಂಡತಿ ಪಂಪಾದೇವಿಗೆ ಬೇರೆ ಬೇರೆ ಹೆಸರುಗಳ ಮೂಲಕ ಕರೆದಿದೆ. ಈಕೆಯು ಈಗಿನ ಮಸರಕಲ್ಲು ೩೦೦ರ ಬಳಿಯಿರುವ ಗೋರಿಕಲ್ಲು-೧೨ (ಈಗಿನ ಗೋರ್ಕಲ್ಲಿನಲ್ಲಿ ಆದಿಮಾನವನ ನೆಲೆಯಿದೆ)ರ ಕಪುಗಲ್ ಜೋಗೇಶ್ವರ ದೇವರಿಗೆ ಮರಚಡ್ ದಾರಿಯಿಂದ ಪೂರ್ವ-ಪಶ್ಚಿಮಾಭಿಮುಖವಾಗಿ ಮತ್ತು ಬಾವಿಗೆ ನಂದಾದೀವಿಗೆಗೆ ಒಟ್ಟು ೨೪ ಮತ್ತರು ಒಂದು ಗಾಣವನ್ನು ದಾನವಾಗಿ ನೀಡಿದ್ದಾಳೆ.

ಹರವಿ ಗ್ರಾಮದ ಪೋಲಿಸ ಪಟೇಲ್ ಚಾವಡಿಯ ಗೋಡೆಯಲ್ಲಿರುವ ಶಾಸನದಲ್ಲಿ ಕ್ರಿ.ಶ.೧೦೭೬ ಉಲ್ಲೇಖವಿದೆ.[೨೦] ಜಗದೇಕಮಲ್ಲನ ರಾಣಿ ಎಡದೊರೆ ನಾಡಿನ ಗ್ರಾಮವೊಂದರ ಸ್ವಯಂಭೂ ದೇವಾಲಯಗಳಾದ ಜಿರ್ಣೋದ್ಧಾರಕ್ಕೆ ಭೂಮಿಯನ್ನು, ಗದ್ದೆಯನ್ನು ೨೦೦ ಕಮ್ಮಕ್ಕೆ ಒಂದು ಗಾಣ ಮನೆಯನ್ನು ಕೊಟ್ಟಿರುವುದು ಕಂಡುಬರುತ್ತದೆ.

ಜಗದೇಕಮಲ್ಲನ ತರುವಾಯ ಅಧಿಕಾರಕ್ಕೆ ಬಂದವನು ೬ನೇ ವಿಕ್ರಮಾದಿತ್ಯ ಚಾಲುಕ್ಯ ವಂಶದಲೆಲ್ಲಾ ಅತ್ಯಂತ ಪ್ರಸಿದ್ಧನಾದ ದೊರೆ. ಸುಮಾರು ಐವತ್ತು ವರ್ಷಗಳ ಸುದೀರ್ಘ ಆಳ್ವಿಕೆಯಲ್ಲಿ ಅವನು ಬರೆಸಿದ ಶಾಸನಗಳು ಸಂಖ್ಯೆಯೂ ಸಾವಿರವನ್ನು ದಾಟಿದೆ[೨೧].ಈ ತಾಲೂಕಿನ ಕೆಲವು ಗ್ರಾಮಗಳಲ್ಲಿ ಈತನ ಕಾಲದ ಶಾಸನಗಳು ದೊರೆತಿವೆ. ಕುರುಡಿಗ್ರಾಮದ ನೀಲಗುಡಿಯ ಗೋಡೆಗೆ ಒರಗಿಸಿರುವ ಕಲ್ಲಿನ ಮೇಲೆ ಕ್ರಿ.ಶ. ೧೦೬೨ರ ಉಲ್ಲೇಖವಿದೆ[೨೨].

ತ್ರುಟಿತಗೊಂಡಿರುವ ಈ ಶಾಸನದಲ್ಲಿ ೬ನೇ ವಿಕ್ರಮಾದಿತ್ಯನನ್ನು ತ್ರಿಭುವನಮಲ್ಲ ಎಂದು ಉಲ್ಲೇಖಿಸಿದೆ. ಕುರುಡಿಯ ಪಲ್ಲೇಶ್ವರ ದೇವರಿಗೆ ಪೂಜೆ ನೈವೇದ್ಯ ಮುಂತಾದ ಕಾರ್ಯಗಳಿಗೆ ಭೂಮಿಯನ್ನು ದಾನವಾಗಿ ಕೊಡಲಾಗಿದೆ. ಈ ಗ್ರಾಮದ ಮಹಾಜನಗಳ ಗುಣಗಾನವನ್ನು ಮಾಡಲಾಗಿದ್ದು ಕುರುಡಿಯು ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ರೂಡ ಎಂದು ಕರೆಸಿಕೊಳ್ಳುತ್ತಿದ್ದ ವಿಷಯ ಈ ಶಾಸನದಿಂದ ತಿಳಿದು ಬರುತ್ತದೆ.

ಕಲ್ಲೂರಿನ ಮಾರತೇಶ್ವ ದೇವಾಲಯದ ಒಳಗೋಡೆಯ ಇನ್ನೊಂದು ಕಲ್ಲಿನ ಮೇಲೆ ಕ್ರಿ.ಶ.೧೦೯೬ರ[೨೩] ಉಲ್ಲೇಖವಿದೆ. ‘ಚಕ್ರವರ್ತಿ’ಯ ನರ್ಮದಾ ನದಿಯ ತೀರದಲ್ಲಿ ಬೀಡು ಬಿಟ್ಟಿದ್ದಾಗ ತನ್ನ ವಿದ್ಯಾಗುರುಗಳಾದ

ಸೋಮಯಾಜಿಯವರಿಗೆ ಕಲ್ಲೂರು ಗ್ರಾಮವನ್ನು ಪಂಚಲಾಂಗೂಲ ಕ್ರತುವಿಗಾಗಿ (ಯಾಗಕ್ಕಾಗಿ) ದಾನವನ್ನು ಪಡೆಯುತ್ತಾನೆ[೨೪]. ಈ ಶಾಸನದಲ್ಲಿ ಸೋಮಾಯಾಜಿಯನ್ನು ಹಲವಾರು ಹೆಸರುಗಳಿಂದ ಕರೆಯಲಾಗಿದೆ.

ತುಪ್ಪದೂರು ಗ್ರಾಮದ ಹುಡೆಯದ ಮೇಲೆ ನಿಲ್ಲಿಸಿರುವ ಶಾಸನದ ಮೇಲೆ ೧೧-೧೨ನೇ ಶತಮಾನದ ಉಲ್ಲೇಖವಿದೆ[೨೫] ಶಾಸನದ ಪ್ರಾರಂಭದಿಂದ ಅಂತ್ಯದವರಿಗೆ ಪ್ರತಿ ಸಾಲಿನ ಆರಂಭದ ಅಕ್ಷರಗಳು ಹಾಳಾಗಿದ್ದು ಪೂರ್ಣ ಮಾಹಿತಿ ದೊರೆಯುವುದಿಲ್ಲ. ಅಗ್ರಹಾರ ತೆನೆಯ....ಯಲ್ಲಿ ದೇವರನ್ನು ಪ್ರತಿಷ್ಠಾಪಿಸಿ ತೋಟವನ್ನು ದಾನ ನೀಡಿದಂತೆ ತುಪ್ಪದೂರಿನ ಉಲ್ಲೇಖವಿದ್ದು ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ್ದಾಗಿದೆ.

ಕರುಡಿ ನೀಲಗುಡಿಯ ಒಳಗೋಡೆ ಮೇಲಿರುವ ಶಾಸನದಲ್ಲಿ ಕ್ರಿ.ಶ.೧೧೨೩ರ[೨೬] ಉಲ್ಲೇಖವಿದ್ದು ದೇವಾಲಯಕ್ಕೆ ದಾನ ನೀಡಿರುವ ವಿಷಯವನ್ನು ತಿಳಿಸುತ್ತದೆ. ಬಲ್ಲಟಗಿಯ ಹನುಮಂತ ದೇವಾಲಯದ ಹಿಂಭಾಗದಲ್ಲಿರುವ ಶಾಸನದ ಮೇಲೆ ಕ್ರಿ.ಶ.೧೧೫೪[೨೭] ಉಲ್ಲೇಖದಲ್ಲಿ ಬಳ್ಳನಿಟ್ಟಗಿಯ ಪ್ರಭುವೊಬ್ಬನ ಉಲ್ಲೇಖ ಮಾತ್ರ ಇದೆ. ಬಲ್ಲಟಗಿಯ ಮಸೀದಿಯ ಒಳಗೆ ಗೋಡೆಗೆ ಸೇರಿಸಿರುವ ಒಡೆದ ಕಲ್ಲಿನ ಮೇಲಿನ ಅಕ್ಷರಗಳು ೧೨ನೇ ಶತಮಾನದ ಲಿಪಿಯಲ್ಲಿದ್ದು ತ್ರೈಲೋಕ್ಯ ನಗರಾರಂಭ...ಪೃಥ್ವಿವಲ್ಲ ಭಂ...ಚಾಳುಕ್ಯಭರಣಂ ಎಂದು ಉಲ್ಲೇಖಿಸಿದೆ[೨೮].ನುಗುಡೋಣಿ ಬಸವೇಶ್ವರ ದೇವಾಲಯದ ಸಮೀಪದ ಕಲ್ಲಿನ ಮೇಲೆ ೧೨ನೇ ಶತಮಾನದ ಉಲ್ಲೇಖವಿದ್ದು ಸಿರಿಯೂರಿನ ನಖರೇಶ್ವರ ದೇವರಿಗೆ ೧೨ಮತ್ತರು ಭೂಮಿಯನ್ನು ಕೊಟ್ಟಿರುವುದು ಉಲ್ಲೇಖಿಸುತ್ತದೆ[೨೯].

ರಾಯಚೂರು ಜಿಲ್ಲೆಯ ಇತಿಹಾಸದಲ್ಲಿ ವಿಜಯನಗರದರಸರ ಆಳ್ವಿಕೆಯು ಬಹುಮುಖ್ಯವಾದ ಘಟ್ಟ. ಒಂದೆಡೆ ವಿಜಯನಗರ, ಇನ್ನೊಂದೆಡೆ ಬಹುಮನಿ ಮನೆತನಗಳು ಇಲ್ಲಿಯ ಫಲವತ್ತಾದ ಪ್ರದೇಶಕ್ಕಾಗಿ ಹಲವಾರು ಯುದ್ಧಗಳನ್ನು ಮಾಡಿದವು. ಕೃಷ್ಣದೇವರಾಯನ ಕಾಲಕ್ಕೆ ಆತನ ಘನತೆಯನ್ನು ಹೆಚ್ಚಿಸಿದುದೇ, ರಾಯಚೂರು ಅಂದು ಪ್ರಬಲವೆನಿಸಿದ್ದ ಇಸ್ಮಾಯಿಲ್ ಆದಿಲ್‌ಶಾಹನನ್ನು ಕ್ರಿ.ಶ.೧೫೨೦ರಲ್ಲಿ ಸೋಲಿಸಿ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡನು. ಅದೇ ಸಂದರ್ಭದಲ್ಲಿ ಮಾನುವೆ, ಹಾನಗಲ್ಲು, ಆಲಂಪೂರ ರಾಯಚೂರು, ಮಾರ್ಗಡೆ ದುರ್ಗಗಳನ್ನು ಗೆದ್ದನು. ಭೀಮಾ ಮತ್ತು ಕೃಷ್ಣಾ ನದಿಗಳ ಸಂಗಮಸ್ಥಳದಲ್ಲಿ 'ರತ್ನಧೇನು' ಮಹಾದಾನವನ್ನು ಮಾಡಿ ತನ್ನ ಹೆಂಡತಿ ಚಿನ್ನಾದೇವಿಯಿಂದ ಗೋದಾನವನ್ನು ಇನ್ನೋರ್ವ ಮಡದಿ ತಿರುಮಲದೇವಿಯಿಂದ ಕನಕದಾನವನ್ನು ಕೊಡಿಸಿದನು[೩೦].

ಕವುತಾಳದ ತ್ರೈಯಾಂಬಕೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕಲ್ಲಿನ ಮೇಲೆ ಕ್ರಿ.ಶ.೧೫೫೧ರ ಉಲ್ಲೇಖವಿದೆ[೩೧] ಅಚ್ಯುತರಾಯನ ಆಳ್ವಿಕೆಯ ತರುವಾಯ ಕ್ರಿ.ಶ.೧೫೪೩ರಲ್ಲಿ ಸದಾಶಿವರಾಯನು ಪಟ್ಟವೇರುತ್ತಾನೆ. ಈತನ ಕಾಲಕ್ಕೆ ಸೇರಿರುವ ಈ ಶಾಸನದಲ್ಲಿ ರಾಮರಾಯನ ಉಲ್ಲೇಖವು ಬಂದಿದೆ. ಕೊನೆಯ ಅರಸನಾದ ಈತನಕಾಲದಲ್ಲೆ ಕೂಡಿದ ವಿಜಯನಗರ ಹಾಳು ಹಂಪೆಯಾಗಿ ಮಾರ್ಪಡುವಂತಾಯಿತು. ಕ್ರಿ.ಶ.೧೫೬೫ರ ನಂತರ ಬಿಜಾಪುರ ಅರಸರ ವಶವಾಯಿತು.

### ಅಸ್ಪಷ್ಟ ಮಾಹಿತಿಯನ್ನು ಒದಗಿಸುವ ಒಟ್ಟು ಶಾಸನಗಳು

ಇಂತಹ ಶಾಸನಗಳಲ್ಲಿ ವಿವರಗಳು ಸ್ಪಷ್ಟವಿರುವುದಿಲ್ಲ. ಇವು ಕೇವಲ ಕಾಲ ಲಿಪಿ ಇಲ್ಲವೆ ಒಬ್ಬ ವ್ಯಕ್ತಿಯ ಹೆಸರು ಒಂದು ಪ್ರದೇಶ ಹೆಸರನ್ನು ಮಾತ್ರ ಸೂಚಿಸುತ್ತದೆ. ಇಂತವುಗಳಿಂದ ಸರಿಯಾದ ಮಾಹಿತಿಯು ದೊರೆಯುವುದಿಲ್ಲವಾಗುತ್ತವೆ. ಊಹೆಗೆ ಆಸ್ಪದ ಕೊಡುತ್ತದೆ. ಅಂತಹ ಶಾಸನಗಳು ಈ ಭಾಗದಲ್ಲಿ ಕೆಲವು ದೊರೆಯುತ್ತದೆ. ಗೋಗೆಬಾಳದ ಬಸವಣ್ಣ ದೇವಾಲಯದ ಸಮೀಪದಲ್ಲಿರುವ ಕಲ್ಲಿನ ಮೇಲಿನ ಅಕ್ಷರಗಳು ೧೦ನೇ ಶತಮಾನಕ್ಕೆ ಸೇರಿದವಾಗಿವೆ.[೩೨] ಬಲ್ಲಟಗಿಯ ಹನುಮಂತ ದೇವಾಲಯ ಹಿಂಭಾಗದಲ್ಲಿರುವ ಕಲ್ಲಿನ ಮೇಲೆ ಕ್ರಿ.ಶ.೧೧೫೪ರ ತ್ರೈಲೋಕ್ಯಮಲ್ಲನ ಉಲ್ಲೇಖದ ಜೊತೆಗೆ ಬಳ್ಳನಿಟ್ಟಗೆಯ ಪ್ರಭುವೊಬ್ಬನನ್ನು ಹೆಸರಿಸಿದೆ.[೩೩] ಇದೇ ಗ್ರಾಮದ ಮಸೀದಿಯ ಒಳಗೆ ಗೋಡೆಗೆ ಸೇರಿಸಿರುವ ಒಡೆದ ಕಲ್ಲಿನ ಮೇಲಿನ ಅಕ್ಷರಗಳ ದೃಷ್ಟಿಯಿಂದ ಇದು ೧೨ ನೇ ಶತಮಾನದ ಲಿಪಿ ಎಂದು ಗುರುತಿಸಬಹುದು. ರಾಜೊಳ್ಳಿ ಗ್ರಾಮದ ಹೊರಗೆ ಬಿದ್ದಿರುವ ತುಂಡು ಶಾಸನದಲ್ಲಿ ಕಾಲದ ಉಲ್ಲೇಖಮಾತ್ರ ದೊರಕುತ್ತದೆ. ಜುಕೂರು ಬಸವಣ್ಣ ದೇವಾಲಯದಲ್ಲಿರುವ ತುಂಡು ಶಾಸನದಲ್ಲಿರುವ ಅಕ್ಷರಗಳು ಸುಮಾರು ಕ್ರಿ.ಶ.೧೭-೧೮ನೇ ಶತಮಾನದ ಲಿಪಿ. ಆತನೂರು ಗ್ರಾಮದ ಆಗಸಿಯ ಮುಂಭಾಗದಲ್ಲಿರುವ ತುಂಡು ಶಾಸನದಲ್ಲಿ ಅಂಗಿರಸ ನಾಮಸಂವತ್ಸರದ ಮಾರ್ಗಶಿರ ಸು॥ ೧ರ ಉಲ್ಲೇಖ ಮಾತ್ರ ಇದೆ. ಮಾನ್ವಿ ಪಟ್ಟಣದ ದದ್ದಲ ಗ್ರಾಮಕ್ಕೆ, ಹೋಗುವ ದಾರಿಯ ತಿರುಕಣ್ಣನ ಮನೆಯ ಹತ್ತಿರದ ಬಾವಿಯ ಒಳಗೆ ಇರುವ ಕಲ್ಲಿನಲ್ಲಿ ಬಹುತೇಕ ಹಾಳಾಗಿರುವ ವಿವರಗಳು ದೊರಕುತ್ತದೆ. ಮಾದಲಾಪುರಿನಲ್ಲಿರುವ ಪ್ರವೇಶ ದ್ವಾರದಲ್ಲಿರವು ತುಂಡು ಕಲ್ಲಿನಲ್ಲಿ ಮೂರು ಸಾಲಿನ ಪ್ರಾರಂಭದಲ್ಲಿ ಅಕ್ಷರಗಳಿದ್ದು ತುಟಿತಗೊಂಡಿದೆ. ಅದೇ ಸ್ಥಳದಲ್ಲಿ ಇನ್ನೊಂದು ಒಡೆವ ಕಲ್ಲಿನಲ್ಲಿ ಕೂಡ ಅದೇ ಅಕ್ಷರಗಳಿದ್ದು ಅಸ್ಪಷ್ಟವಾಗಿದೆ. ಕೊರವಿ ಗ್ರಾಮದ ಪ್ರವೇಶದಲ್ಲಿಯೇ ಬಿದ್ದಿರುವ ಗುಂಡಿನ ಮೇಲೆ ಸಾಲಿನ ಅಕ್ಷರಗಳಿದ್ದು ಅಸ್ಪಷ್ಟವಾಗಿವೆ. ಪದ್ದಲಿಪನ್ನೂರು ಗ್ರಾಮದ ಆಂಜನೇಯ ಗುಡಿಯಲ್ಲಿ ಇಟ್ಟಿರುವ ತುಂಡಾದ ಕಲ್ಲಿನ ಮೇಲೆ ನಾಲ್ಕು ಸಾಲಿನಲ್ಲಿ ಅಕ್ಷರಗಳಿದ್ದು ಅಸ್ಪಷ್ಟವಾಗಿವೆ. ಅದೇ ರೀತಿಯಲ್ಲಿ ಆರ್ನಳ್ಳಿ ಗ್ರಾಮದ ಹೊಲದಲ್ಲಿರುವ ಶಾಸನದಲ್ಲಿ ಎರಡು ಸಾಲುಗಳಿದ್ದು ಪ್ರಾರಂಭದ ಅಕ್ಷರಗಳು ಹಾಳಾಗಿದ್ದು ಉಳಿದವು ಅಪೂರ್ಣವಾಗಿದೆ. ಬೆಟ್ಟದೂರಿನ ಶಾಲೆಯ ಸಮೀಪದ ವೀರಗಲ್ಲಿನ ಮೇಲೆ ಒಂದು ಸಾಲಿನಲ್ಲಿ ಅಕ್ಷರಗಳು ಅಸ್ಪಷ್ಟವಾಗಿದ್ದು ಉಳಿದ ಸಾಲುಗಳು ಹಾಳಾಗಿವೆ. ಬಾಗಲವಾಡ ಗ್ರಾಮದ ಹೊರಭಾಗದ ಗದ್ದೆಯ ಒಡ್ಡಿನ ಮೇಲೆ ಬಿದ್ದಿರುವ ಶಾಸನದಲ್ಲಿ ದೊಡ್ಡ ದೊಡ್ಡ ಅಕ್ಷರಗಳಿದ್ದು ತುರುವಲ್ಲನ ಮಗ ಭೀಮ ತುರುವಲ್ಲಿ ಎಂದು ಏಳು ಸಾಲಿನಲ್ಲಿ ಅಸ್ಪಷ್ಟವಾಗಿದೆ. ಹೀಗೆ ದೊರೆತಿರುವ ತ್ರುಟಿತ ಮತ್ತು ಅಸ್ಪಷ್ಟ ಮಾಹಿತಿ ಒಳಗೊಂಡಿರುವ ಶಾಸನಗಳು ಕಂಡುಬಂದಿವೆ.

ಚಕ್ರವರ್ತಿಗಳು ರಾಣಿಯರು ದಾನ ಕೊಟ್ಟಿರುವುದರ ಜೊತೆ ಮಾಂಡಳಿಕರು ಸಾಮಂತರು ಗಾವುಂಡರು ಬೇರೆ ಬೇರೆ ಕಾರಣಗಳಿಗಾಗಿ ದಾನ ಕೊಟ್ಟಿರುವ ವಿಷಯ ಶಾಸನಗಳಿಂದ ತಿಳಿದು ಬರುತ್ತದೆ.

## ೪.೨. ಸ್ಮಾರಕ ಶಾಸನ

ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ನಿಲ್ಲಿಸಿರುವ ಕಲ್ಲುಗಳೇ ವೀರಗಲ್ಲುಗಳು ಧರ್ಮದ ಸಾರ್ಥಕತೆ ತ್ಯಾಗದಲ್ಲಿ. ತ್ಯಾಗಕ್ಕೆ ಸಾಕ್ಷಿಯಾಗಿ ದೊರೆಯುವುದ ದಾನದಲ್ಲಿ ಎನ್ನುವಂತೆ ಇವು ದೇಹ ಮತ್ತು ಪ್ರಾಣಗಳನ್ನು ತ್ಯಾಗ ಮಾಡಿದ ವಿಷಯವನ್ನು ಸಾರುತ್ತವೆ. ಮರಣ ಹೊಂದಿದ ವ್ಯಕ್ತಿಯನ್ನು ನೆನಪು ಮಾಡಿ ಅಭಿವ್ಯಕ್ತಿಗೊಳಿಸುವ ಸಾಧನ ಇವೆಂದು ಹೇಳಬಹುದು. ವೇದಗಳಲ್ಲಿ ಶತಪಥ ಬ್ರಾಹ್ಮಣದಲ್ಲಿ ಇಂತಹ ಸ್ಮಾರಕಗಳ ಉಲ್ಲೇಖವಿದೆ.[೩೪]

ಕನ್ನಡ ನಾಡಿನ ಜನರು ಸಾಮಾನ್ಯವಾಗಿ ಮೊದಲಿನಿಂದಲೂ ಶೂರರಾಗಿದ್ದರೆಂಬುದಕ್ಕೆ ಸ್ಮಾರಕ ಶಾಸನಗಳು ನಾಡಿನ ಇತಿಹಾಸಕ್ಕೆ ಪ್ರಾತ್ಯಕ್ಷ ಸಾಕ್ಷಿಯಂತಿವೆ. ವೀರತನ ಎನ್ನುವ ಪದ ಸಂಸ್ಕೃತದ 'ಬೀರ' ಎಂಬ ಪದದಿಂದ ನಿಷ್ಪತ್ತಿಯಾಗಿದೆ. ಮಾನವ ತಾನು ದುಡಿದು ಗಳಿಸಿದ ಸಂಪಾದನೆಯಲ್ಲಿ ಸ್ವಲ್ಪ ಭಾಗ ದಾನಕ್ಕೆ ಮೀಸಲಿರಿಸಬೇಕು. ಹಾಗೆ ವೀರನಾದವನು ಯುದ್ಧದಲ್ಲಿ ಕಲಿತನದಿಂದ ಹೋರಾಟ ಮಾಡಬೇಕು ಇವೆರಡು ಅಂದಿನ ಸಮಾಜದ ಜನರ ಬದುಕಿನ ಆದರ್ಶಗಳಾಗಿದ್ದವು.

ಸಾಮಾನ್ಯವಾಗಿ ವೀರಗಲ್ಲಿನಲ್ಲಿ ಮೂರು ಹಂತಗಳಿವೆ. ಕೆಳಗಿನ ಹಂತದಲ್ಲಿ ವೀರ ತನ್ನ ಶತ್ರುಗಳೊಡನೆ ಹೋರಾಡುತ್ತಿರುವಂತೆಯೇ ಮಧ್ಯದ ಹಂತದಲ್ಲಿ ಮಡಿದ ಅವನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುತ್ತಿರುವಂತೆಯೂ ಮೇಲಿನ ಹಂತದಲ್ಲಿ ಅವನು ಭಗವಂತನ ಸಾನಿಧ್ಯವನ್ನು ಪಡೆದು ಭಗವಂತನ ಪೂಜೆ ಮಾಡುವಂತೆ ತೋರಿಸಲಾಗುತ್ತದೆ. ಕೆಲವು ವೀರಗಲ್ಲುಗಳ ಮೇಲೆ ೪-೫-೬ ಹಂತಗಳಲ್ಲು ದೊರಕುತ್ತವೆ. ಯಾವುದೇ ಹಂತವಿರದೆ ಕುದರೆ ಸವಾರಿ ಮಾಡುತ್ತಿರುವ ಅಥವಾ ಯುದ್ಧ ಮಾಡುತ್ತಿರುವ ಅಥವಾ ಬಿಲ್ಲನ್ನು, ಖಡ್ಗವನ್ನು ಹಿಡಿದು ನಿಂತಿರುವ ಯುದ್ಧವನ್ನು ರಣರಂಗವನ್ನು ಸೂಚಿಸುತ್ತಿರುವ ಚಿತ್ರವನ್ನು ವೀರಗಲ್ಲು ಎಂದು ಕರೆಯಬಹುದು[೩೫]. ಇಲ್ಲಿ ವೀರರುದವರೆಗೆ ದುರ್ಗಸಿಂಹನ ಪಂಚತಂತ್ರದಲ್ಲಿ ಹೇಳುವ ಮಾತು ಗೆದ್ದರೆ ರಾಜಲಕ್ಷ್ಮಿಯು ದೊರೆಯುತ್ತಾಳೆ ಸೋತರೆ ಸ್ವರ್ಗದಲ್ಲಿ ಅಪ್ಸರೆಯರು ದೊರೆಯುತ್ತಾರೆ ಎಂದು.

ಮಾನ್ವಿ ತಾಲೂಕಿನಲ್ಲಿ ಸ್ಮಾರಕ ಶಾಸನಕ್ಕಿಂತ ಸ್ಮಾರಕ ಶಿಲೆಗಳಲ್ಲಿ ಹೆಚ್ಚಾಗಿ ವೀರಗಲ್ಲುಗಳ ಸಂಖ್ಯೆ ಕಂಡುಬರುತ್ತದೆ ಕೆಲವು ಭಾಗಗಳಲ್ಲಿ ವೀರಗಲ್ಲುಗಳಿಗೆ ಪೂಜೆ ಸಲ್ಲುತ್ತಿವೆ. ಕೊಟ್ನಿಕಲ್ ಗ್ರಾಮದ ಬನ್ನಿ ಕಟ್ಟಿಗೆ ಹೋಗುವ ದಾರಿಯಲ್ಲಿ ಸಾಲು ಸಾಲಾಗಿ ನಿಲ್ಲಿಸಿರುವ ವೀರಗಲ್ಲುಗಳಿವೆ. ಇಲ್ಲಿಯ ೩ ವೀರಗಲ್ಲುಗಳಿಗೆ ಪೂಜೆ ಮಾಡಿರುವುದು ಕಂಡುಬರುತ್ತದೆ. ಅದರಲ್ಲಿ ಒಬ್ಬ ವೀರನು ಉದ್ದವಾದ ಭರ್ಚಿಯನ್ನು ಹಿಡಿದುಕೊಂಡು ಬೇಟೆಗೆ ಹೊರಟಿರುವಂತೆ ಕಾಣುತ್ತದೆ. ಇದು ವಿಜಯನಗರೊತ್ತರ ಹಂಡೆಪಾಳೆಗಾರರ ಕಾಲಕ್ಕೆ ಸೇರಿದ್ದಾಗಿದೆ. ಇನ್ನೊಂದು ಚಿತ್ರದಲ್ಲಿ ವೀರನು ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಖಡ್ಗವಿಡಿದು ನಿಂತಿರುವ ಭಂಗಿಯಿದೆ. ಕೊರಳೊಳಗೆ ನಕ್ಷತ್ರಾಕಾರದ ಆಭರಣವಿದೆ. ತಲೆಯ ಮುಡಿಯನ್ನು ಕಟ್ಟಿದ್ದಾನೆ. ಬಲಭಾಗದಲ್ಲಿ ಜಿಂಕೆಯ ಚಿತ್ರ ಎಡಭಾಗದಲ್ಲಿ ಸ್ವಾನವಿರುವ ಚಿತ್ರವಿದೆ. ಇದು ಭೇಟೆಯಾಡಲು ಹೋರಟಿರುವ ವೀರನ ಚಿತ್ರವಾಗಿದೆ. ಇನ್ನೊಂದು ಶಿಲ್ಪದಲ್ಲಿ

ವೀರನು ಎರಡು ಕೈಗಳನ್ನೆತ್ತಿ ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಖಡ್ಗವಿದ್ದು ಬಟ್ಟಯಿ ಮುಡಿಯನ್ನು ಗಂಟು ಹಾಕಿದಂತಿದೆ. ಬಲಭಾಗದಲ್ಲಿ ಸ್ವಾನವಿರುವುದು ಚಿತ್ರಿತವಾಗಿದ್ದು ವೀರನು ನಡುಪಿಗೆ ಪಟ್ಟಿಯನ್ನು ಕಟ್ಟಿದ್ದಾನೆ. ಭೇಟಿಗೆ ಹೊರಟಿರುವಂತೆ ಚಿತ್ರಿತವಾಗಿದೆ.

ಪಕ್ಕದಲ್ಲಿರುವ ಇನ್ನೊಂದು ಮಾಸ್ತಿ ವೀರಗಲ್ಲುಗಳಲ್ಲಿ ಪ್ರಧಾನವಾಗಿ ಕಂಡುಬರುವ ಶಿಲ್ಪಶೈಲಿಯಂದರೆ ತ್ರಿಭಂಗಿಯಲ್ಲಿ ನಿಂತಿರುವ ಎಡಭಾಗದಲ್ಲಿ ದೊಡ್ಡಾದಾಗಿ ವೀರನನ್ನು ಚಿತ್ರಿಸಲಾಗಿದೆ ಮಧ್ಯದಲ್ಲಿ ಸ್ತ್ರೀಯು ಆಕೆಯ ಬಲಭಾಗದಲ್ಲಿ ಮತ್ತೊಬ್ಬ ವೀರನು ತನ್ನ ಎಡಗೈಯಲ್ಲಿ ಉದ್ದವಾದ ಕೋಲಿನ ಹಾರಾಡುತ್ತಿರುವ ಧ್ವಜವನ್ನು ಇನ್ನೊಂದು ಕೈಯಲ್ಲಿ ಕತ್ತಿಯನ್ನು ಮುಡಿಯನ್ನು ವಸ್ತ್ರದಿಂದ ಕಟ್ಟಿಕೊಂಡುತಿದೆ. ಕೊರಳೊಳಗೆ ಆಭರಣವನ್ನು ಹಾಕಿಕೊಂಡಿದ್ದಾನೆ. ಮಹಾಸತಿಯ ಎಡಭಾಗದಲ್ಲಿರುವ ವೀರನು ಎಡಗೈಯಲ್ಲಿ ಗುರಾಣಿಯನ್ನು ಮತ್ತೊಂದು ಕೈಯಲ್ಲಿ ಖಡ್ಗವನ್ನು ಅದನಿರಿಸುವ ಸಾಧನವನ್ನು ನಡು ಪಟ್ಟಿಯ ಗುರಾಣಿಯನ್ನು ಮತ್ತೊಂದು ಕೈಯಲ್ಲಿ ಖಡ್ಗವನ್ನು ಅದನಿರಿಸುವ ಸಾಧನವನ್ನು ನಡು ಪಟ್ಟಿಯಲ್ಲಿ ಕಟ್ಟಿದ್ದಾನೆ. ತೊಟ್ಟಿರುವ ಪಂಜೆಯ ಚುಂಗನ್ನು ಬಲಭಾಗದಲ್ಲಿ ಇಳಿ ಬಿಟ್ಟದ್ದಾನೆ. ಮಡಿಯನ್ನು ಬಟ್ಟೆಯಿಂದ ಕಟ್ಟಿರುವನು ಕೊರಳೊಳಗೊಂದು ಆಭರಣವು ಇರುವುದು. ಎರಡು ಕೈಗಳಲ್ಲಿ ತೊಳಬಂಧಿಯನ್ನು ಹಾಕಿಕೊಂಡಿದ್ದಾನೆ. ಮಧ್ಯದಲ್ಲಿರುವ ಸ್ತ್ರೀಯು ತುರುಬನ್ನು ಕಟ್ಟಿಕೊಂಡು ಹಣೆಯಲ್ಲಿ ಕುಂಕುಮವಿದೆ. ಕಿವಿಯೊಲೆಯನ್ನು ಹಾಕಿದ್ದಾಳೆ. ತನ್ನ ಬಲಗೈಯನ್ನು ಎಡಗೈಯ ಮೇಲೆ ಇಟ್ಟುಕೊಂಡು ಏನನ್ನೋ ಹಿಡಿದುಕೊಂಡಂತಿದೆ. ಸೀರೆಯ ನಿರಿಗೆಗೆಗಳನ್ನು ಚಿತ್ರಸಲಾಗಿದೆ ತುರುವನ್ನು ಕೆತ್ತಲಾಗಿದೆ. ವಿಜಯ ಸಾಧಿಸಿ ವೀರ ಮರಣ ಹೊಂದಿರುವ ಮಾಸ್ತಿ ವೀರಗಲ್ಲ ಇರುವಂತೆ ಕಾಣಿಸುತ್ತದೆ.

ಆಯಾತಾಕಾರದ ಮತ್ತೊಂದ ಬಂಡೆಗಲ್ಲಿನ ಮೇಲೆ ಮೂರು ಜನ ವೀರರ ಶಿಲ್ಪವಿದೆ. ಮಧ್ಯದಲ್ಲಿರುವ ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಉಳಿದಂತೆ ಇಬ್ಬರು ಬಲಗೈಯಲ್ಲಿ ಕತ್ತಿಯನ್ನು ಇಬ್ಬರು ಬಂದೂಕನ್ನು ಕೈಗಳಲ್ಲಿ ಹಿಡಿದು ಹೊರಟಿರುವಂತೆ ಕೆತ್ತಲಾಗಿದೆ. ಮೂರು ವೀರರ ನಡುವಿನಲ್ಲಿ ಕತ್ತಿಯನ್ನು ಇರಿಸುವ ಸಾಧವನ್ನು ಕಟ್ಟಿಕೊಂಡಿದ್ದಾರೆ ಕೊರಳೊಳಗೆ ಆಭರಣದ ಸರವನ್ನು ಹಾಕಿಕೊಂಡಿದ್ದಾರೆ ಸ್ವಾನವನ್ನು(ನಾಯಿ) ಚಿತ್ರಿಸಲಾಗುವ ವಿಜಯ ನಗರೊತ್ತರದ ಪಾಳೇಗಾರರ ವೀರಗಲ್ಲಾಗಿದೆ.

ಅದೇ ಸ್ಥಳದಲ್ಲಿರುವ ಇನ್ನೊಂದು ವೀರಗಲ್ಲಿನಲ್ಲಿ ವೀರನು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಮಧ್ಯದಲ್ಲಿ ಕತ್ತಿ ಹಿಡಿದಿದ್ದಾನೆ. ಬಲಗೈಯಲ್ಲಿ ಖಡ್ಗವನ್ನು ಹಿಡಿದು ಅರ್ಧಕ್ಕೆ ಕೈ ಎತ್ತಿ ಸುತ್ತುಲು ತುರುಗಳನ್ನು ಶ್ವಾನವನ್ನು ಕೆತ್ತಲಾಗಿದೆ. ವಿಶೇಷ ಟೋಪಿಯನ್ನು ಧರಿಸಿದ್ದಾನೆ ಕೊರಳೊಳಗೆ ಮಣಿಗಳಿಂದ ಕೂಡಿದ ಸರವನ್ನು ಹಾಕಿಕೊಂಡಿದ್ದಾನೆ. ಎರಡು ತೋಳುಗಳಲ್ಲಿ ತೊಳಬಂಧಿಯನ್ನು ಧರಿಸಿದ್ದಾನೆ. ಎರಡು ಕಾಲಿಗೆ ಕಾಲುಕಡುಗವನ್ನು ಹಾಕಿದ್ದಾನೆ. ಎರಡು ಕಾಲಿನ ಮಧ್ಯದಲ್ಲಿ ಉಡುಪನ್ನು ಇಳಿಬಿಟ್ಟಿದ್ದಾನೆ. ಇದೊಂದು ಈ ಭಾಗದಲ್ಲಿ ದೊರೆತಿರುವ ತುರುಗೊಳ ಶಾಸನವಾಗಿದೆ. ೪ಅಡಿ ಎತ್ತರ ಬಿಳಿಕಲ್ಲಿನಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ.

ಕುರುಡಿಯ ಈರಣ್ಣನ ಮನೆಯ ಹತ್ತಿರವಿರುವ ಐದು ವೀರಗಲ್ಲುಗಳು ಇವೆ. ಇವುಗಳಲ್ಲಿ ಎರಡು ವೀರಗಲ್ಲುಗಳಲ್ಲಿ ಎಡಗೈಯಲ್ಲಿ ಬಿಲ್ಲನ್ನು ಬಲಗೈಯಲ್ಲಿ ಬಾಣಗಳನ್ನು ಮೇಲಕ್ಕೆತ್ತಿ ಹಿಡಿದಿದ್ದಾರೆ. ನಡುವಿನಲ್ಲಿ ಕತ್ತಿಯನ್ನು ಸಿಕ್ಕಿಸಿಕೊಂಡಿದ್ದಾರೆ. ಒಬ್ಬ ವೀರ ಮುಡಿಯನ್ನು ನೇರವಾಗಿ ಕಟ್ಟಿದರೆ ಇನ್ನೊಬ್ಬ ಬಲಮಗ್ಗಲಿಗೆ ಕಟ್ಟಿದ್ದಾನೆ ಇಬ್ಬರು ತೋಳಬಂಧಿಯನ್ನು ಹಾಕಿದ್ದಾರೆ ಇನ್ನೊಳಿದ ಮೂರು ವೀರಗಲ್ಲುಗಳಲ್ಲಿ ಎಡಗೈಯಲ್ಲಿ ಗುರುಣಿಯನ್ನು ಮಧ್ಯದಲ್ಲಿ ಸ್ವಲ್ಪ ಕೆಳಭಾಗದಲ್ಲಿ ಮತ್ತೊಂದರಲ್ಲಿ ಭುಜಕ್ಕೆ ಎತ್ತಿ ಹಿಡಿದಿದ್ದಾನೆ. ಬಲಗೈಯಲ್ಲಿ ಒಬ್ಬ ಖಡ್ಗವನ್ನು ಕತ್ತಿಯನ್ನು ಮೇಲಕ್ಕೆ ಎತ್ತಿದಾನೆ. ಕೇಶವನ್ನು ವಸ್ತ್ರದಿಮದ ಬಲ ಬದಿಯಲ್ಲಿ ಕಟ್ಟಿದ್ದಾರೆ. ಒಬ್ಬ ವೀರ ಮಾತ್ರ ಬಲಗೈಗೆ ತೋಳಬಂದಿಯನ್ನು ಹಾಕಿದ್ದಾನೆ. ಬಳಕೆಗೊಂಡಿರುವ ಕಲ್ಲುಗಳು ಕರಿ ಬಣ್ಣದಲ್ಲಿವೆ ಚೌಕಕಾರದಲ್ಲಿದ್ದು ಒಂದು ದುಂಡಾಕಾರದಲ್ಲಿದೆ. ಸುಮಾರು ೩ಅಡಿ ಎತ್ತರದಲ್ಲಿವೆ.

ಕುರುಡಿಗೆ ಹೋಗುವ ಊರು ಪ್ರವೇಶಕ್ಕೆ ಮುಂಚಿತವಾಗಿ ಬಸ್ ನಿಲ್ದಾಣದ ಹೋಟಲ್‌ನ ಹೊರಭಾಗದಲ್ಲಿ ರೋಡಿನ ಪಕ್ಕದಲ್ಲಿ ವೀರಗಲನ್ನು ನೆಡಲಾಗಿದೆ. ಮೆಲ್ಭಾಗದಲ್ಲಿ ಸೂರ್ಯ ಚಂದ್ರರಿದ್ದು ಎಡಗೈಯಲ್ಲಿ ಗುರಾಣಿಯನ್ನು ಭುಜಕ್ಕೆ ಎತ್ತಿಹಿಡಿದಿದ್ದಾನೆ. ಖಡ್ಗವನ್ನು ಭುಜದ ಕೆಳಭಾಗಕ್ಕೆ ಎತ್ತಿ ಹಿಡಿದಿದ್ದಾನೆ. ಮುಡಿಯನ್ನು ವಸ್ತ್ರದಿಂದ ಬಲಬದಿಗೆ ಕಟ್ಟಿದ್ದಾನೆ. ದಪ್ಪವಾದ ಮೀಸೆಯಿದೆ ಕಿವಿಯೋಲೆಯನ್ನು ಹಾಕಿದ್ದಾನೆ. ನಾದ ದಾಸಣ ಈತನ ಅಳಿಯ ಸೋಮಯ್ಯ ಮತ್ತು ಮಾಚಗಾವುಂಡ ಎನ್ನುವ ಈ ಮೂರು ಜನ ಇಂಗುಣಿಗೆಯ ಮಹಾದೇವರಿಗೆ ಭೂಮಿ ಮತ್ತು ತೋಟ ಒಂದನ್ನು ದಾನ ಬಿಟ್ಟಿರುವ ವಿಚಾರ ತಿಳಿದುಬರುತ್ತದೆ. ೧೬ನೇ ಶತಮಾನದ ವಡವಾಟಿ ಗ್ರಾಮದ ಗುಡ್ಡದ ಮೇಲಿರುವ ಮೊಡಗಿರಿ ಎನ್ನವ ಗುಡಿಯ ಹತ್ತಿರದ ಗುಂಡಿನ ಮೇಲೆ ಮೊಖಸಿಯಾದ ನಾಗೋಜಿ ಮಠದ ಸಕಯ ಚಿನಯ್ಯ ನಾಡಗೌಡ ಸಮಸ್ತ ಪ್ರಜೆಗಳು ಸೇರಿ ತಿಮ್ಮಪ್ಪ ದೇವರಿಗೆ ದಾನ ನೀಡಿರುವ ವಿಷಯ ತಿಳಿದು ಬರುತ್ತದೆ. ೩ ಮತ್ತು ೫ನೇ ಸಾಲು ತ್ರುಟಿತಗೊಂಡಿವೆ.

ಕಲ್ಲೂರಿನ ಮಾರುಟೇಶ್ವರ ದೇವಾಲಯ ಹಿಂದೆ ಇರುವ ಗುಡ್ಡದ ಬಂಡೆಯ ಮೇಲಿನ ಶಾಸನವು ಕ್ರಿ.ಶ.೭–೮ನೆ ಶತಮಾನದ್ದಾಗಿದ್ದು ಕಹರಯ್ಯ ಉಲ್ಲೇಖವನ್ನು ಮಾತ್ರ ಹೊಂದಿದೆ. ಅದೇ ರೀತಿಯಾಗಿ ನುಗುಡೋಣಿಯ ೧೧೩೪ರ ಉಲ್ಲೇಖವಿರುವ ಬಸವೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕಲ್ಲಿನ ಮೇಲೆ ಚೌಕಿಮಯ್ಯನು ೬ನೇ ವಿಕ್ರಮಾದಿತ್ಯನ ದಂಡನಾಯಕನಿರಬೇಕು ಈತನು ಬಿಮಾಳಕುಂಕೆಯ ಮಹಾದೇವರಿಗೆ ೬ ಮತ್ತರು ಭೂಮಿಯನ್ನು ದಾನವಾಗಿ ಕೊಟ್ಟಿರುವ ವಿಷಯವನ್ನು ದುಖಲಿಸುತ್ತಾನೆ. ಬಾಗಲವಾಡದ ಕ್ರಿ.ಶ.೧೧೯೬ರ ಶಾಸನವು ಹಹಿಹಯ ವಂಶದ ಅಯ್ಯಣನು ೬ನೇ ವಿಕ್ರಮಾದಿತ್ಯನ ಸಾಮಂತನಾಗಿದ್ದುಕೊಂಡು ಗ್ರಾಮದ ಪ್ರಭುಗಾವುಂಡನಿಗೆ ಕೆಲವು ತೆರಿಗೆ ನೀಡಿದ ವಿಷಯ ಇದರ ಜೊತೆಗೆ ಭೂಮಿಯನ್ನು ದಾನವಾಗಿ ನೀಡುತ್ತಾನೆ. ಇದಲ್ಲದೆ ಈತನ ರಾಣಿಮಲಯ ಮತಿಯ ಪಿರಿಯರಸಿ ಎಂದು ಉಲ್ಲೇಖಿಸುತ್ತದೆ.

ರಾಜೊಳ್ಳಿಯ ಗಂಗಪ್ಪನ ಹೊಲದಲ್ಲಿ ಬಿದ್ದಿರುವ ೧೨೮೨ರ ಶಾಸನವು ಕಸಗವುಡನ ಗರ್ಗೇಶ್ವರ ದೇವರಿಗೆ ಧಾರಾಪೂರ್ವಕವಾಗಿ ದಾನ ನೀಡಿದ ವಿವರವನ್ನು ೯ ಸಾಲಿನಲ್ಲಿ ತಿಳಿಸಲಾಗಿದೆ.

ಮಾನ್ವಿ ತಾಲೂಕಿನ ಶಾಸನದಲ್ಲಿ ಉಕ್ತವಾಗಿರುವ ಮಹಿಳೆಯರ ಇತಿಹಾಸ ಕಲ್ಯಾಣ ಚಾಲುಕ್ಯರ ಕಾಲದಿಂದಲೇ ಪ್ರಾರಂಭವಾಗುತ್ತದೆ. ಶಾಸನಗಳ ಒಡಲಿನಲ್ಲಿ ಮೂಡಿ ನಿಂತವರು ಪ್ರಭುವರ್ಗ ಮತ್ತು ಉನ್ನತ ವರ್ಗದ ಮಹಿಳೆಯರು ಹೆಚ್ಚಾಗಿ ಕಾಣಿಸಿಕೊಳ್ಳುತ್ತಾರೆ. ನಂತರ ಸಾಮಂತ, ಮಾಂಡಳಿಕ, ದಂಡನಾಯಕ ಗಾವುಂಡ ಮತ್ತು ಸಾರ್ವಜನಿಕ ಸಾಮಾನ್ಯ ವ್ಯಕ್ತಿಗಳು ಕೂಡ ಕಡಿಮೆ ಪ್ರಮಾಣದಲ್ಲಿ ಕಾಣಸಿಗುತ್ತಾರೆ. ಇಲ್ಲಿ ಚಕ್ರವರ್ತಿಗಿಂತ ಮಿಕ್ಕವರ ಸಂಖ್ಯೆ ಅಧಿಕವಾಗಿದೆ.

ಅಲ್ಲಿಯೇ ಬಿದ್ದಿರುವ ಗುಂಡಿನ ಮೇಲೆ ಅಕ್ಷರಗಳಿದ್ದು ಅಸ್ಪಷ್ಟವಾಗಿವೆ. ಪದ್ದಲಿ ಪನ್ನೂರು ಗ್ರಾಮದ ಆಂಜನೆಯ ಗುಡಿಯಲ್ಲಿ ಇಟ್ಟಿರುವ ತುಂಡಾದ ಕಲ್ಲಿನ ಮೇಲೆ ನಾಲ್ಕು ಸಾಲಿನಲ್ಲಿ ಅಕ್ಷರಗಳಿದ್ದು ಅಸ್ಪಷ್ಟವಾಗಿವೆ. ಅದೇ ರೀತಿಯಲ್ಲಿ ಆರ್ನಳ್ಳಿ ಗ್ರಾವುದ ಹೊಲದಲ್ಲಿರುವ ಶಾಸನದಲ್ಲಿ ಎರಡು ಸಾಲುಗಳಿದ್ದು ಪ್ರಾರಂಭದ ಅಕ್ಷರಗಳು ಹಾಳಾಗಿದ್ದು ಉಳಿದವು ಅಪೂರ್ಣವಾಗಿವೆ. ಬೆಟ್ಟದೂರಿನ ಶಾಲೆಯ ಸಮೀಪದ ವೀರಗಲ್ಲಿನ ಮೇಲೆ ಒಂದು ಸಾಲಿನಲ್ಲಿ ಅಕ್ಷರಗಳು ಅಸ್ಪಷ್ಟವಾಗಿದ್ದು, ಉಳಿದ ಸಾಲುಗಳು ಹಾಳಾಗಿವೆ. ಬಾಗಲವಾಡ ಗ್ರಾಮದ ಹೊರಭಾಗದ ಗದ್ದೆಯ ಒಡ್ಡಿನ ಮೇಲೆ ಬದ್ದಿರುವ ಬಿಳಿ ಕಲ್ಲಿನಲ್ಲಿ ದೊಡ್ಡ ದೊಡ್ಡ ಅಕ್ಷರಗಳಿದ್ದು ತುಮಿವಲ್ಲನ ಮಗ ಭೀಮ ತುಮಿವಲ್ಲ ಎಂದು ತಿಳಿಸುತ್ತದೆ. ಏಳು ಸಾಲಿನಲ್ಲಿರುವ ಇನ್ನುಳಿದ ಅಕ್ಷರಗಳು ಅಸ್ಪಷ್ಟವಾಗಿವೆ. ಹೀಗೆ ದೊರೆತಿರುವ ಕೆಲವು ಗ್ರಾಮಗಳಲ್ಲಿ ತ್ರುಟಿತ ಮತ್ತು ಅಸ್ಪಷ್ಟ ಮಾಹಿತಿ ಒಳಗೊಂಡಿರುವ ಶಾಸನಗಳು ಕಂಡು ಬರುತ್ತವೆ.

ಈ ಭಾಗದಲ್ಲಿ ಕಂಡುಬರುವ ಶಾಸನಗಳು ಮೂಲಕ ದಂಡನಾಯಕರು, ಮಹಾಮಂಡಳೇಶ್ವರರು ಸಾಮಂತರು, ಗಾವುಂಡರು ಬೇರೆ ಬೇರೆ ಕಾರಣಗಳಿಗಾಗಿ ದಾನ ನೀಡಿರುವ ವಿಷಯ ತಿಳಿದುಬರುತ್ತದೆ. ತಡಕಲ್ಲಿನ ಪಾಟೀಲರ ಮನೆಯ ಹತ್ತಿರವಿರುವ ಕಲ್ಲಿನ ಮೇಲೆ ಸೇವುಣರ ಅರಸನಾಗಿದ್ದ ರಾಮಚಂದ್ರನ ಆಳ್ವಿಕೆಯ ಕ್ರಿ.ಶ.೧೨೩೨ರ ಉಲ್ಲೇಕವಿದ್ದು ಬಾಗುಳಹಾರಿ ಗ್ರಾಮದ ಉಲ್ಲೇಖ ಮಾತ್ರ ಕಂಡುಬರುತ್ತದೆ.

ನದಿ ದಂಡೆಯಲ್ಲಿರುವ ಸಂಕೇಶ್ವರ ಗ್ರಾಮದ ಮರುಳಯ್ಯ ದೇವಾಲಯದ ಹತ್ತಿರದ ತುಟಿತಗೊಂಡಿರುವ ಶಾಸನವು ಅಹಿಹಯ ಮದಿಸೆಟ್ಟಿ ಮುಂತಾದ ಊರಿನ ಸಮಸ್ತ ಪ್ರಭುಗಲು ಸೇರಿ ಬೊಮ್ಮಯ್ಯನಿಗೆ ೧೫ ಮತ್ತರು ಭೂಮಿಯನ್ನು ದಾನವಾಗಿ ಬಿಟ್ಟ ವಿಷಯ ತಿಳಿಸುವುದುರ ಜೊತೆಗೆ ಇದೊಂದು ವ್ಯಕ್ತಿದಾನವಾಗಿದೆ ಕಂಡುಬರುತ್ತದೆ. ಕ್ರಿ.ಶ.೧೩ನೇ ಶತಮಾನದ್ದಾಗಿದೆ.

ಗುಡಿಹಾಳ ಗ್ರಾಮದ ಊರಿನ ಈಶ್ವರ ಗುಡಿಯ ಗೋಡೆಯ ಮೇಲಿರುವ ಕ್ರಿ.ಶ.೧೩ನೇ ಶಾಸನದಲ್ಲಿ ಮಹಾಸಾಮಂತ ಕೊರಳೊಳಗೆ ಎರಡು ದೊಡ್ಡ ಗಾತ್ರದ ಸರಗಳನ್ನು ಅದರಲ್ಲಿ ಪದಕಗಳನ್ನು ಹಾಕಿದ್ದಾನೆ ಕಾಲಿಗೆ ಕಾಲ್ಗಡಗವನ್ನು ಧರಿಸಿದ್ದಾನೆ. ಬಲಭಾಗದಲ್ಲಿ ನೀರಿನ ಕಳಸವನ್ನು ಇರಿಸಲಾಗಿದು ಕಾಲಿನ ಮಧ್ಯದಲ್ಲಿ ಮತ್ತು ನಡುಪಿನ ಎರಡು ಬದಿಗಳಲ್ಲಿ ವಸ್ತ್ರವನ್ನು ಇಳಿಬಿಟ್ಟದ್ದಾನೆ. ಕರಿಕಲ್ಲಿನಲ್ಲಿ ಕೆತ್ತಲಾಗಿರುವ ಇದು ೫ಅಡಿ ಎತ್ತರ ೬ಅಡಿ ಅಗಲ ಹೊಂದಿದ್ದು ಚೌಕಕಾರದಲ್ಲಿದ್ದು ಯುದ್ಧದಲ್ಲಿ ಹೋರಾಡಿ ಮಡಿದಿದ್ದಾನೆ. ಸೂರ್ಯ-ಚಂದ್ರರಿರುವತನಕ ವೀರರ ನೆನಪನ್ನು ತರುವಂತದ್ದು.

ಕಪ್ಪಗಲನಲ್ಲಿನ ಕೇಶವ ದೇವಾಲಯದ ಮುಂದಿರುವ ಈ ವೀರಗಲ್ಲಿನ ಕೆಳಭಾಗದಲ್ಲಿ ತ್ರಿಭಂಗಿಯಲ್ಲಿ ಬಿಲ್ಲನ್ನು ಹಿಡಿದು ಬಾಣವನ್ನು ಎತ್ತಿ ಹಿಡಿದು ಹೋರಾಟದ ಚಿತ್ರವಿದ್ದರೆ ಮಧ್ಯದಲ್ಲಿ ಅವರನ್ನು

ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ದೇವತಾ ಸ್ತ್ರೀಯರು ಮೇಲ್ಭಾಗದ ಹಂತದಲ್ಲಿ ಸೂರ್ಯ ಈಶ್ವರನ ಮುಂದೆ ವೀರ ಕುಳಿತಿರುವಂತೆ ಇನ್ನೊಂದು ಕಡೆ ಚಂದ್ರ, ಸ್ತ್ರೀಯು ನಿಂತಿರುವ ಚಿತ್ರವಿದೆ. ಮೂರು ಹಂತದ ಶಾಸನಗಳು ದೊರತಿವೆ. ಗಾತ್ರದಲ್ಲಿ ೨ ಅಡಿ ಎತ್ತರದಲ್ಲಿ ಬಣ್ಣವನ್ನು ಹಚ್ಚಲಾಗಿದ್ದು ಕಪ್ಪುಕಲ್ಲಾಗಿದೆ.

ಬಾಲಗವಾಡದ ರಾಮಲಿಂಗೇಶ್ವರ ದೇವಾಲಯದಲ್ಲಿ ನಿಲ್ಲಿಸಲಾದ ಕರಿಕಲ್ಲು ೪ ಅಡಿ ಎತ್ತರ ೩ಅಟಿ ಅಗಲದ ಮೂರು ಹಂತದಲ್ಲಿದೆ. ವೀರನು ಬಿಲ್ಲನು ಹಿಡಿದು ಬಲಗೈಯನ್ನು ಟೊಂಕದ ಮೇಲೆ ಇಟ್ಟುಕೊಂಡು ಬೆನ್ನ ಹಿಂದೆ ಭತ್ತಳಿಕೆಯಲ್ಲಿ ಬಿಲ್ಲನ್ನು ಇಟ್ಟಿರುವ ಮಗ್ಗಲಿಲ್ಲಿ ಕೇಶವನ್ನು ಕಟ್ಟಿರುವ ಕೆಳಭಾಗದ ಚಿತ್ರವಿದೆ. ಈತನ ಮುಂದೆ ಮಾಸ್ತಿಯು ಏನನ್ನೊ ಹಿಡಿದಿರುವ ದೃಶ್ಯವಿದೆ. ಮಧ್ಯದಲ್ಲಿ ವೀರನನ್ನು ದೇವತಾ ಸ್ತ್ರೀಯರು ಕೊಂಡಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ಚಿತ್ರ ಹಾಳಾಗಿದೆ. ತೋಳಬಂಧಿಯನ್ನು ಧರಿಸಿದ ಮಾಸ್ತಿವೀರಗಲ್ಲಾಗಿದೆ.

ಇದೇ ಗ್ರಾಮದ ಬಡಿಗೆತನ ಮಾಡುವ ಸ್ಥಳ ಮುಂದು ಭಾಗದಲ್ಲಿ ೩ ಹಂತದಲ್ಲಿರುವ ಯುದ್ಧ ಹೋರಾಟವನ್ನು ತಿಳಿಸುವ ಕೆಳಭಾಗದಲ್ಲಿ ಕುದರೆ ಮೇಲೆ ಕುಳಿತಿರುವ ವೀರನು ಭರ್ಚಿಯನ್ನು ಎಸೆಯುತ್ತಿರುವುದು ಈತನ ಮುಂದೆ ಮತ್ತೊಬ್ಬ ವೀರನು ಬಿಲ್ಲನ್ನು ಹಿಡಿದು ಬಾಣವನ್ನು ತೆಗೆಯುತ್ತಿರು ದೃಶ್ಯವಿದೆ. ಕೊರಳೊಳಗೆ ಆಭರಣಗಳನ್ನು ಧರಿಸಿದ್ದಾನೆ. ವೀರನು ದೇವತಾ ಭುಜದ ಮೇಲೆ ಕೈಹಾಕಿಕೊಂಡು ಸ್ವರ್ಗಕ್ಕೆ ಕೊಂಡೊಯುತ್ತಿರುವ ಚಿತ್ರವಿದೆ ಮೇಲ್ಭಾಗದಲ್ಲಿ ಈಶ್ವರ ಮುಂದೆ ವೀರನು ಕೈಯನ್ನು ಮುಂದಿಟ್ಟುಕೊಂಡು ಕುಳಿತಿರುವ ಚಿತ್ರವಿದೆ. ಮತ್ತೊಂದು ಕಡೆ ಸ್ತ್ರೀಯು ಒಂದು ಕೈ ಮೇಲಕ್ಕೆತ್ತಿ ನಿಂತಿರುವ ಚಿತ್ರವಿದೆ. ಆಯಾತಾಕಾರದಲ್ಲಿ ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿರುವ ಇದು ೬ ಅಡಿ ಎತ್ತರ ೩ ಅಡಿ ಅಗಲವನ್ನು ಹೊಂದಿರುವ ವೀರಗಲ್ಲಿಗೆ ಅಲ್ಲಿನ ಜನ ಪೂಜಿಸುತ್ತಾರೆ.

ಬಾಗಲವಾಡದಲ್ಲಿರುವ ಕವಿತಾಳಕ್ಕೆ ಹೋಗುವ ರಸ್ತೆಯ ಪಕ್ಕದಲ್ಲಿ ನಿಲ್ಲಿಸಿರುವ ಕಲ್ಲಿನ ಕೆಳಭಾಗದಲ್ಲಿ ರಕ್ತಾಕ್ಷಿ ಅಮಾವಾಸ್ಯೆ ಎಂದಿದ್ದು ಹಾಮಯ್ಯನನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೮೭೮ ರಲ್ಲಿ ಹಾಕಿಸಿರುವ ವೀರಗಲ್ಲು ಶಾಸನವಾಗಿದೆ. ಚೌಕಕಾರದಲ್ಲಿರುವ ಇದು ಕರಿಕಲ್ಲಿನಲ್ಲಿ ಶಾಸನವನ್ನು ಕೆತ್ತಲಾಗಿದ್ದು. ಚೌಕಾಕಾರದ ಗೆರೆಯನ್ನು ಹಾಕಿದ್ದಾರೆ. ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡುಯುತ್ತಿರುವ ಇದರ ಮೇಲ್ಭಾಗದ ಮಧ್ಯದಲ್ಲಿ ವ್ಯಕ್ತಿಯು ಕುಂತಿರುವ ಭಂಗಿ ಆತನ ಅಕ್ಕಪಕ್ಕದಲ್ಲಿ ಸ್ತ್ರೀಯರು ನಿಂತಿರುವ ದೃಶ್ಯವಿದೆ. ಇದರ ಮೇಲ್ಭಾದಲ್ಲಿ ಈಶ್ವರನನ್ನು ಕೆತ್ತಲಾಗಿದೆ. ಇಂತಹ ವೀರಗಲ್ಲು ಶಾಸನ ಬೇರೆ ಕಡೆ ಸಿಕ್ಕರೂ ಈ ಭಾಗದಲ್ಲಿ ದೊರತಿರುವುದು ಅಪರೂಪದ ವೀರ ಶಾಸನವಾಗಿದೆ. ಸುತ್ತಲೂ ಕಲ್ಲು ಒಡೆದಿದ್ದು ಈ ಮೂರು ಹಂತದ ದೃಶ್ಯ ಹಾಗೆ ಇದೆ.

ಇದೇ ಊರಿನ ಶಾಲೆಯ ಆವರಣದಲ್ಲಿ ಕಲ್ಲಿನ ಮೇಲೆ ಸಿಡಿ ತಲೆಯ ಚಿತ್ರವಿರುವುದು ಕಂಡು ಬರುತ್ತದೆ. ಈ ಕಲ್ಲಿನ ಕೆಳಭಾಗದಲ್ಲಿ ಚೌಕಾಕಾರದ ಜಾಗದಲ್ಲಿ ಶಿಲ್ಪವನ್ನು ಬಿಡಿಸಲಾಗಿದೆ. ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಅವನ ಪಕ್ಕದಲ್ಲಿ ದೊಡ್ಡದಾದ ಕತ್ತಿಯನ್ನು ಇಡಲಾಗಿದೆ. ರುಂಡವು ದೇಹದಿಂದ ಬೇರೆಯಾಗಿರುವುದು ಕಂಡು ಬರುತ್ತದೆ. ಮೇಲ್ಭಾಗದ ಮಧ್ಯದಲ್ಲಿ ಅಪ್ಸರೆಯರು ಸ್ವರ್ಗಕ್ಕೊಯ್ಯುತ್ತಿದ್ದಾರೆ. ಮೇಲ್ಭಾಗದಲ್ಲಿ ವೀರನು ಕುಳಿತಿದ್ದು ಅಕ್ಕಪಕ್ಕದಲ್ಲಿ ಅಪ್ಸರೆಯರಿದ್ದಾರೆ.

ಉಮಳಿ ಹೊಸೂರಿನಲ್ಲಿ ಇನ್ನು ಕೆಲವು ಗ್ರಾಮಗಳಲ್ಲಿ ಇಂತಹ ವೀರಗಲ್ಲು ಮಾಸ್ತಿ ಗಲ್ಲುಗಳು ಕ್ಷೇತ್ರಧ್ಯಾಯನದಿಂದ ಬಹಳಷ್ಟು ದೊರಕಿವೆ. ಕೆಲವು ವೀರಗಲ್ಲುಗಳಿಗೆ ಬಣ್ಣಗಳನ್ನು ಬಳಿಯಲಾಗಿದೆ. ಇನ್ನು ಕೆಲವು ಮಣ್ಣಿನಲ್ಲಿ ಅವಿತುಕೊಳ್ಳುವ ಸಮಯಕ್ಕಾಗಿ ಕಾಯುತ್ತವೆ. ಇವುಗಳನ್ನು ಉಳಿಸಿಕೊಳ್ಳುವ ಯಾವ ಪ್ರಯತ್ನವು ನಡೆಯದೆ ಅವನತಿಯ ಹಾದಿಯನ್ನು ಹಿಡಿದಿರುವುದು ಶಾಸನ ಪ್ರೀಯರಿಗೆಲ್ಲ ಅತ್ಯಂತ ನೋವಿನ ಸಂಗತಿಯಾಗಿದೆ.

## ಕಲ್ಲೂರಿನಲ್ಲಿರುವ ಕ್ರಿ.ಶ.೧೫೪೪ ಶಾಸನಗಳು

### ೪.೩.ಇತರೆ ಶಾಸನಗಳು

ಕೆಲವು ಶಾಸನಗಳು ಅರಸರ ಚಕ್ರವರ್ತಿಗಳ, ರಾಣಿಯರ, ಮಾಂಡಳೀಕ ಆಡಳಿತ ರಾಜಕೀಯ ಕೆವು ವಿಷಯಗಳನ್ನು ಮೇಲ್ವರ್ಗದವರ ಕುರಿತು ತಿಳಿಸುತ್ತಿದ್ದರೆ, ಇನ್ನು ಕೆಲವು ಶಾಸನಗಳು ಊರಿನ ಜನರಿಗೆ ಕೆಲವು ನಿಬಂಧನೆಗಳನ್ನು ವಿಧಿಸಿರುವ ಜನಸಾಮಾನ್ಯರ ಕುರಿತು ವಿಚಾರಗಳನ್ನು ತಿಳಿಸುತ್ತದೆ. ಕಲ್ಲೂರಿನ ಕ್ರಿ.ಶ. ೧೫೪೪ರ ಶಾಸನವು ಊರಿಗೆ ಕಟ್ಟಲೆಯನ್ನು ಶ್ರೀಶೈಲಯ ಹಿರಿಯರು ಬಯನಿ ಲಕ್ಷಹ ಒಡೆಯರಿಗೆ ಅಧೀನನಾಗಿರಬೇಕೆಂದು ಇಲ್ಲವೆ ಸ್ಥಿರವಾಗಿರಬೇಕೆಂದು ಕಟ್ಟಳೆ ವಿಧಿಸುತ್ತಾರೆ. ಪ್ರತಿ ಊರಲ್ಲಿಯೂ ಇರುವತ್ತೆ ಕಾರ ಹುಣ್ಣಿಮೆಯ ದಿನ ಎತ್ತುಗಳನ್ನು ಕರಿಹರಿಯುತ್ತಾರೆ. ಅಥವಾ ಎತ್ತುಗಳನ್ನು ಓಡಿಸುವ ಪರಿಪಾಠವಿದ್ದು ಮೊದಲು ಮುಟ್ಟಿದ ಎತ್ತುಗಳನ್ನು ಕಟಬಾವಿಯಲ್ಲಿ ಊಣಿಸಬೇಕು ಒಂದು ವೇಳೆ ಸತ್ತರೆ ಅದನ್ನು ಬಂಡಿ ಮೇಲೆ ತೆಗೆದು ಕೊಂಡು ಹೋಗಬೇಕೆಂದು ತಿಳಿಸುತ್ತವೆ. ಈಗಲೂ ಈ ಪದ್ದತಿಯಿದ್ದು ಎತ್ತುಗಳು ಓಡಿದ ನಂತರ ಕೆಲವು ಗಂಡಸರು ಗುಡ್ಡವನ್ನು ಹತ್ತಿ ಅಲ್ಲಿ ಬೆಳೆದಿರುವ ಒಂದು ರೀತಿಯ ಮರದ ಟೊಂಗೆಯನ್ನು ಮುರಿದು ಕೊಂಡು ಮನೆಯ ಜಂತಿಯಲ್ಲಿ ಇಡುವ ಪದ್ಧತಿ ಇದೆ. ಗೋರ್‌ಕಲ್‌ನಲ್ಲಿರುವ ಅಗಸಿಯ ಹತ್ತಿರದ ಆಂಜನೇಯ ದೇವಾಲಯದಲ್ಲಿ ಬಿದ್ದಿರುವ ಕಲ್ಲಿನ ಮೇಲಿನ ವಿವರಗಳಿಂದ ಊರಿನ ಕೆಲವು ಜನರಿಗೆ ಕೆಲವು ನಿಬಂಧನೆಗಳನ್ನು ವಿಧಿಸಿರುವ ವಿಷಯ ತಿಳಿದುಬರುತ್ತದೆ. ಕಲ್ಲೂರಿನ ಶಾಲೆಯ ಕಟ್ಟದ ಛಾವಣಿಯ ತೊಲೆಯ ಮೇಲಿರುವ ನಮಸ್ತುಗ ಶಿರಶ್ಚುಂಬಿ ಚಂದ್ರ ಚಾಮರ ಚಾರವ್ಯ ತ್ರೈಲೋಕ್ಯ ನಗರಾರಂಭ ಮೂಲ ಎಂದು ಹೇಳುವುದರ ಜೊತೆಗೆ ದಕ್ಷಿಣಕ್ಕೆ ಆಗಾ ಖೊಸರೋ ಸಾಹೇಬನ ಕಾಲದಲ್ಲಿ ಕಟ್ಟಡವನ್ನು ಕಟ್ಟಿಸಿರುವ ವಿಷಯ ತಿಳೀಸುತ್ತದೆ.

ಆತನೂರಿನ ಅಗಸಿ ಮುಂಭಾಗದಲ್ಲಿರುವ ಕಂಬದ ಮೇಲೆ ಇರುವ ಮಾಹಿತಿಯಲ್ಲಿ ಆತನೂರಿನ ಗುತ್ತಿಗೆ ಒಕ್ಕಲು ಮಾಡಿಕೊಂಡು ಗುತ್ತಿಗೆ ಒಪ್ಪಂದದ ಬಗೆ ತಿಳಿಸುತ್ತದೆ. ಉಳಿದ ವಿವರಗಳು ಅಸ್ಪಷ್ಟವಾಗಿವೆ. ಇದು ೨೪ಸಾಲುಗಳಿಂದ ಕೂಡಿದೆ. ಹೀಗೆ ಮಾನ್ವಿ ತಾಲೂಕು ಪ್ರಾಚೀನ ಕರ್ನಾಟಕದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ನಿಂತಿರುವುದು ಶಾಸನಗಳಿಂದ ತಿಳಿಯುತ್ತದೆ. ಈ ಭಾಗದ ಜನ-ಜೀವನ ಉದ್ಯೋಗ ವ್ಯಾಪಾರ ದಾನ-ಧರ್ಮ ಮತ್ತು ಕಾನೂನಿನ ಪರಿಚಯವಾಗುತ್ತದೆ. ನಾಯಿಂದರು,

ಗೊರವರು, ಕಲ್ಲುಕುಟಿಗರು, ಟಂಕಸಾಲಿಯಲ್ಲಿ ಕೆಲಸ ಮಾಡುತ್ತಿದ್ದ ಸಾಮಾನ್ಯ ಜನರು, ಸಾಮಾನ್ಯವರ್ಗದ ಸ್ತ್ರೀಯರು ಇಲ್ಲಿಯ ಶಾಸನಗಳ ಮೂಲಕ ದಾನ ಕೊಟ್ಟ ವಿಚಾರ ತಿಳಿದು ಬರುತ್ತದೆ. 'ಅನ್ನದಾನಕ್ಕಿಂತ ಇನ್ನು ದಾನ ಉಂಟೆ' ಎನ್ನುವ ಶರಣರ ಸುಳ್ನುಡಿಗೆಗಳು ನೆನಪಿಗೆ ಬರುತ್ತವೆ.

## ಟಿಪ್ಪಣಿಗಳು

೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ.ಎಂ.ಚಿದಾನಂದ ಮೂರ್ತಿ, ೨೦೦೨, ಪುಟ೩೬

೨. ಶಾಸನಗಳು ಮತ್ತು ಕನ್ನಡ ಸಾಹಿತ್ಯ ಡಾ.ಸಿ.ನಾಗಭೂಷಣ ೨೦೦೫ ಪುಟ ೧೧

೩. ಶಾಸನ ಸಂಗ್ರಹ ಎ.ಎಂ. ಅಣ್ಣಿಗೇರಿ, ಡಾ.ಆರ್ ಶೇಷ ಶೇಷ ಶಾಸ್ತ್ರೀ, ೧೯೯೯, ಪುಟ vii

೪. ಶಾಸನ ಸಂಗ್ರಹ ಎ.ಎಂ. ಅಣ್ಣಿಗೇರಿ ಡಾ. ಆರ್. ಶೇಷ ಶಾಸ್ತ್ರಿ ೧೯೯೯ ಪುಟ xi

೫. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ.ಚಿದಾನಂದ ಮೂರ್ತಿ ೨೦೦೨, ಪುಟ ೩೬

೬. ಕನ್ನಡ ಶಾಸನಗಳ ಅಧ್ಯಯನ ಎಸ್.ಎಸ್.ಭಗವತಿ, ಎಚ್.ಎಸ್.ಮೇಲಿನಮನಿ, ೨೦೦೪, ಪುಟ ೯೧

೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ.ಚಿದಾನಂದ ಮೂರ್ತಿ ೨೦೦೨ ಪುಟ ೩೭ ೩೯(ಸಂ) ಪೂರ್ವೋತ್ತ

೮. ರಾಯಚೂರು ಜಿಲ್ಲೆಯ ಶಾಸನ ಸಂಪುಟ ದೇವರಕೊಂಡಾರೆಡ್ಡಿ ೨೦೦೭ ಪುಟ ೨೭೩

೯. ರಾಯಚೂರು ಜಿಲ್ಲೆಯ ಶಾಸನ ಸಂಪುಟ ದೇವರಕೊಂಡಾರೆಡ್ಡಿ ೨೦೦೭ ಪುಟ ೩೨೫

೧೦. ರಾಯಚೂರು ಜಿಲ್ಲೆಯ ಶಾಸನ ಸಂಪುಟ ದೇವರಕೊಂಡಾರೆಡ್ಡಿ ೨೦೦೭ ಪುಟ ೯೦

೧೧. ರಾಯಚೂರು ಜಿಲ್ಲೆಯ ಶಾಸನ ಸಂಪುಟ ದೇವರಕೊಂಡಾರೆಡ್ಡಿ ೨೦೦೭ ಪುಟ ೩೦೦

೧೨. ಅದೇ ಸಂಪುಟದ ಪುಟ ಸಂ. ೩೦೪

೧೩. ಅದೇ ಸಂಪುಟದ ಪುಟ ಸಂ. ೩೦೮

೧೪. ಅದೇ ಸಂಪುಟದ ಪುಟ ಸಂ. ೨೩೮

೧೫. ಅದೇ ಸಂಪುಟದ ಪುಟ ಸಂ. ೩೧೬

೧೬. ಅದೇ ಸಂಪುಟದ ಪುಟ ಸಂ. ೩೦೪

೧೭. ಅದೇ ಸಂಪುಟದ ಪುಟ ಸಂ. ೩೨೬

೧೮. ಅದೇ ಸಂಪುಟದ ಪುಟ ಸಂ. ೩೧೨

೧೯. ಅದೇ ಸಂಪುಟದ ಪುಟ ಸಂ. ೨೭೫

೨೦. ಅದೇ ಸಂಪುಟದ ಪುಟ ಸಂ. ೨೭೯

೨೧. ಮನಸಿಂ ಮಾನ್ವಿ ತಾಲೂಕ ಸಾಹಿತ್ಯ ಸಮ್ಮೇಳನ ಸಂಚಿಕೆ ೨೦೦೪ ಪುಟ ೨೨

೨೨. ಶಾಸನ ಸಂಪುಟ ೨೦೦೭ ಪುಟ ೨೬೫

೨೩. ಅದೇ ಸಂಪುಟ ಪುಟ ೨೮೫

೨೪. ಮನಸಿರಿ ಮಾನ್ವಿ ತಾಲೂಕು ಸಾಹಿತ್ಯ ಸಮ್ಮೇಳನದ ಸಂಚಿಕೆ ೨೦೦೪ ಪುಟ ೨೨

೨೫. ಶಾಸನ ಸಂಪುಟ ಪುಟ ೩೩೦

೨೬. ಅದೇ ಸಂಪುಟ ಪುಟ ೨೬೬

೨೭. ಅದೇ ಸಂಪುಟ ಪುಟ ೩೦೩

೨೮. ಅದೇ ಸಂಪುಟ ಪುಟ ೩೦೧

೨೯. ಅದೇ ಸಂಪುಟ ಪುಟ ೨೧೪

೩೦. ಇತಿಹಾಸ ಇಂಚರ ಅಮರೇಶ ಯಾತಗಲ್ ೨೦೦೭ ಪುಟ ೭೭

೩೧. ಶಾಸನ ಸಂಪುಟ ಪುಟ ೩೩೮

೩೨. ಅದೇ ಸಂಪುಟ ಪುಟ ೩೪೨

೩೩. ಅದೇ ಸಂಪುಟ ಪುಟ ೩೦೩

೩೪. ಶೇಷಾದ್ರಿ ಶಾಸ್ತ್ರಿ ಆರ್. ಎಸ್. ಕರ್ನಾಟಕ ವೀರಗಲ್ಲು ೧೯೮೨ ಪುಟ ೧೧

೩೫. ರಾಯಚೂರು ಜಿಲ್ಲೆಯ ಶಾಸನಗಳು ಭಾರತಿ ಬಸವರಾಜ ೨೦೦೫ ಛಾಯಾಚಿತ್ರ ವಿಭಾಗ



### ಪೀಠಿಕೆ

ಯಾವುದೇ ಒಂದು ಪ್ರದೇಶದ ಪ್ರಸ್ತುತ ಸ್ಥಿತಿಗತಿಗಳಲ್ಲಿ ಆ ಪ್ರದೇಶದ ಇತಿಹಾಸದ ಛಾಯೆ ಇದ್ದೇ ಇರುತ್ತದೆ ಹಾಗೆಯೇ ಮಾನ್ವಿ ತಾಲೂಕಿನ ಇಂದಿನ ಸ್ಥಿತಿಗತಿ ನಡೆ–ನುಡಿ, ಭಾಷೆ ಸಾಹಿತ್ಯ ಧರ್ಮ ನಂಬಿಕೆ ಮುಂತಾದವುಗಳಲ್ಲಿ ಇತಿಹಾಸದ ದಟ್ಟ ಪ್ರಭಾವವಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಈ ತಾಲೂಕಿನ ಇತಿಹಾಸ ವಿಶಿಷ್ಟಪೂರ್ಣವಾದದ್ದು. ಈ ಪ್ರದೇಶವನ್ನು ತಮ್ಮದಾಗಿಸಿಕೊಳ್ಳಲು ಹೋರಾಡಿದವರು ಅನೇಕ. ಆದರೆ ಕೇವಲ ಇಲ್ಲಿ ಚಾಲುಕ್ಯ ಅರಸರು ಮಾತ್ರ ಬಹುಕಾಲದವರೆಗೆ ಆಳ್ವಿಕೆ ನಡೆಸಿದರು. ಇವರಲ್ಲಿ ರಾಜನೊಂದಿಗೆ, ದಂಡನಾಯಕರು, ಸಾಮಂತರು ಮತ್ತು ಮಹಾಮಂಡಳೇಶ್ವರರ ನೆರವಿನಿಂದ ಅವರ ಕಾಲಾವಧಿ ದೀರ್ಘಕಾಲದವರೆಗೆ ಹಬ್ಬಿತ್ತು.

### ೫.೧. ಆಡಳಿತ ವ್ಯವಸ್ಥೆ

ಚಕ್ರವರ್ತಿಗಳು ಬಹುವಲ್ಲಭರಾಗಿದ್ದರಿಂದ ಅನೇಕ ಪುತ್ರರನ್ನು ಅವರು ಪಡೆಯುತ್ತಿದ್ದರು. ಪಟ್ಟದರಾಣಿಯ ಹಿರಿಯ ಮಗ ಅಥವಾ ಚಕ್ರವರ್ತಿಯ ಹಿರಿಯ ತಮ್ಮ 'ಯುವರಾಜ'ನೆನಿಸದರೆ, ಉಳಿದವರು ಕೇವಲ ಕುಮಾರರಾಗಿ ರಾಜ್ಯದ ಆಡಳಿತದಲ್ಲಿ ಭಾಗವಿಹಿಸುತ್ತಿದ್ದರು. ರಾಜ್ಯದ ಆಡಳಿತವಲ್ಲಿ ಚಕ್ರವರ್ತಿ ಮೊದಲ ಸ್ಥಾನದಲ್ಲಿದ್ದರೆ, ಯುವರಾಜನ ಸ್ಥಾನ ಎರಡನೆಯಾದಾಗಿತ್ತು. ಇವರ ನಂತರವಲ್ಲಿ ಉಳಿದ ರಾಜಕುಮಾರರು ಕುಮಾರ ವೃತ್ತಿಯಿಂದ ಆಳುತ್ತಿದ್ದರು.

ರಾಷ್ಟ್ರಕೂಟ ಎರಡನೇ ಕೃಷ್ಣನ ಆಳ್ವಿಕೆಯಲ್ಲಿ ಆತನ ಮಗ ಜಗತ್ತುಂಗನು ಎಡೆದೊರೆ–೯೦೦೦ ವಿಭಾಗವನ್ನು ಅಣುಗಜೀವಿತವಾಗಿ, ಆಳುತ್ತಿದ್ದನೆಂದು ಭೋಗಾವತಿ ಶಾಸನ ಹೇಳಿದೆ. ತಂದೆಯ ಆಳ್ವಿಕೆಯಲ್ಲಿಯೇ ಅಕಾಲ ಮೃತ್ಯುವಿಗೆ ತುತ್ತಾದ ಸಂಗತಿ ಭೋಗವತಿ ಶಾಸನದಿಂದ ಮಾತ್ರವೇ ತಿಳಿಯುತ್ತದೆ.

ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಗನಾದ ಎರಡನೇ ತೈಲಪನ ಉಲ್ಲೇಖ ಕುರುಡಿ (೧೧೨೩) ಶಾಸನದಲ್ಲಿದೆ. ಮಹಾಮಂಡಳೇಶ್ವರನೆನಿಸದ್ದ ಅವನು ಬಹುಶಃ ಈ ಪ್ರದೇಶವನ್ನು (ಎಡೆದೊರೆ-೨೦೦೦) ಕುಂಜಾರ ವೃತ್ತಿಯಿಂದ ಆಳುತ್ತಿರಬೇಕು. ಕುರುಡಿಯ ಮತ್ತೊಂದು ಶಾಸನವು (೧೧೩೮) ಮೂರನೇ ಸೋಮೇಶ್ವರನ ಆಳ್ವಿಕೆಯಲ್ಲಿ ಆತನ ಮಗನಾದ ಮೂರನೇ ತೈಲಪನು ಅಗ್ರಹಾರ ರಾರಾಪಿಯಲ್ಲಿ ನಾಗಲದೇವಿಗೆ ಒಂದು ವೃತ್ತಿಯನ್ನು ದಾನವಾಗಿ ನೀಡಿದನು. ಅದರಲ್ಲಿ ಅರ್ಧ ಭಾಗವನ್ನು ನಾಗಲದೇವಿಯು ತಾನು ಕುರುಡಿಯಲ್ಲಿ ಮಾಡಿಸಿದ ದೇವಾಲಯಕ್ಕೆ ಬಿಟ್ಟು ಕೊಟ್ಟುದನ್ನು ಮೇಲಿನ ಶಾಸನ ಹೇಳುತ್ತದೆ. ಇಲ್ಲಿಯ ರಾರಾವಿಯ ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲೂಕಿನ ರಾರಾಪಿಯಾಗಿರಬೇಕೆ? ಅಥವಾ ಮಾನ್ವಿ ತಾಲೂಕಿನ ಆ ಹೆಸರಿನ ಒಂದು ಊರು ಇದ್ದಿತೆ? ಶೋಧಿಸಬೇಕಾಗಿದೆ. ಅದೇನೇ ಇರಲಿ ಮೂರನೇ ತೈಲಪನನು ತಂದೆಯ ಆಳ್ವಿಕೆಯಲ್ಲಿ ರಾಜಕುಮಾರನಾಗಿ ಪ್ರದೇಶವನ್ನು ಆಳುತ್ತಿದ್ದುದು ಮಾತ್ರ ಸ್ಪಷ್ಟವಾಗಿದೆ.

## ರಾಣಿಯರು

ರಾಜನು ಬಹುಪತ್ನಿಯರನ್ನು ಹೊಂದಿರುವುದು ವೈಭವದ ಸಂಕೇತವಾಗಿತ್ತು. ರಾಜಕೀಯ ಭದ್ರತೆಗಾಗಿ ಮೊದಲನೇ ಹೆಂಡತಿಗೆ ಸಂತಾನವಿಲ್ಲದಕ್ಕಾಗಿ ಬಹುಪತ್ನಿತ್ವ ರೂಢಿಯಲ್ಲಿದ್ದಿತು. ರಾಣಿಯರಲ್ಲಿ ಪಿರಿಯರಸಿ, ಪಟ್ಟಮಹಾದೇವಿ ಮತ್ತು ರಾಣಿಯರೆಂಬ ಮೂರು ಗುಂಪುಗಳನ್ನು ಕಾಣುತ್ತೇವೆ. ರಾಣಿಯರು ಪ್ರಭುವರ್ಗದ ಪ್ರಮುಖ ವ್ಯಕ್ತಿಗಳಾಗಿದ್ದರೂ ಅವರು ಯುವರಾಜ ಮತ್ತು ಇತರ ರಾಜಕುಮಾರರಂತೆ ರಾಜ್ಯದ ಬೇರೆ ಬೇರೆ ವಿಭಾಗಗಳನ್ನು ಆಳುತ್ತಿರಲಿಲ್ಲ. ಬದಲಾಗಿ ಕೆಲವು ಬಿಡಿ ಬಿಡಿಯಾದ ಅಗ್ರಹಾರ ಇಲ್ಲವೆ ಭತ್ತ ಗ್ರಾಮಗಳನ್ನು ಮಾತ್ರ ಆಳುತ್ತಿದ್ದರು.

ಮಾನ್ವಿ ತಾಲೂಕಿನ ಶಾಸನಗಳಲ್ಲಿ ಕಾಣಿಸಿಕೊಳ್ಳುವ ರಾಣಿಯರು ಕೇವಲ ದತ್ತಿ ಬಿಡುವಷ್ಟಕ್ಕೆ ಸೀಮಿತರಾಗಿದ್ದಾರೆ. ಅವರು ಇಲ್ಲಿನ ಅನೇಕ ಅಗ್ರಹಾರಗಳನ್ನು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ದತ್ತಿಯನ್ನು ನೀಡಿದ್ದಾರೆ ಈ ಅಗ್ರಹಾರಗಳು ಅವರ ಆಳ್ವಿಕೆಗೆ ಸೇರಿದನ್ನು ಶಾಸನಗಳು ಉಲ್ಲೇಖಿಸುವುದಿಲ್ಲ. ಆದ್ದರಿದ ಅವರು ಇಲ್ಲಿಯ ಯಾವ ಅಗ್ರಹಾರಗಳನ್ನು ಆಳುತ್ತಿರಲಿಲ್ಲವೆಂದು ಹೇಳಬಹುದು.

ಚಾಲುಕ್ಯ ಎರಡನೇ ಜಯಸಿಂಹ ರಾಣಿ ಮಹಾದೇವಿಯ ಉಲ್ಲೇಖ ಬಲ್ಲಟಗಿ (೧೦೨೨) ಶಾಸನದಲ್ಲಿದೆ. ಅವಳು ಬಲ್ಲಟಗಿಯ ತ್ರೈಪುರುಷ ದೇವಾಲಯಕ್ಕೆ ಲೋಕಾದಿತ್ಯ (ಅಯ್ಯಣವಾಡಿ ೨೦೦೦ ಮನ್ನೆಯ)ನಿಂದ ಭೂಮಿಯನ್ನು ಪಡೆದು ದಾನ ಬಿಟ್ಟಿದ್ದಾಳೆ. ಈತನ ಮತ್ತೊಬ್ಬ ರಾಣಿ ಸೋಮಲದೇವಿಯ ಉಲ್ಲೇಖ ಬಲ್ಲಟಗಿಯ ಎರಡು (ಕ್ರಿ.ಶ.೧೦೨೯ ಮತ್ತು ಕ್ರಿ.ಶ.೧೦೩೧) ಮತ್ತು ನುಗಡೋಣಿ (೧೦೩೪)ಯ ಒಂದು ಶಾಸನದಲ್ಲಿದೆ. ಅವಳು ಕ್ರಮವಾಗಿ ಬಸದಿಗೂ ಮತ್ತು ದಿದ್ದಿಗೆ (ಸಿಂಧನೂರು ತಾಲೂಕಿನ ದಿದ್ದಿಗೆ) ಯ ಮಧುಸೂಧನ ಭಟ್ಟರಿಗೂ ದಾನ ನೀಡಿದ್ದಾಳೆ. ಈ ಜಯಸಿಂಹನ ಮತ್ತೊಬ್ಬ ರಾಣಿ ಬಿಜ್ಜಲದೇವಿಯು ಸುಂಕನೂರು (ಕ್ರಿ.ಶ.೧೦೩೧) ಮತ್ತು ತಡಕಲ್ಲು (೧೦೩೩) ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾಳೆ.

ಬಲ್ಲಟಗಿ (ಕ್ರಿ.ಶ.೧೦೫೮) ಶಾಸನದಲ್ಲಿ ಮೊದಲನೇ ಸೋಮೇಶ್ವರನ ರಾಣಿ ಜಾಮಲದೇವಿಯ ಉಲ್ಲೇಖವಿದೆ. ಅಲ್ಲದೆ ಬಾಗಲವಾಡ (ಕ್ರಿ.ಶ.೧೦೫೨) ಮತ್ತು ಬಲ್ಲಟಗಿ ಶಾಸನಗಳಲ್ಲಿ ಈತನ ರಾಣಿಯರ ಅಸ್ಪಷ್ಟ ಉಲ್ಲೇಖವಿದೆ. ಚಾಲುಕ್ಯ ಎರಡನೇ ಸೋಮೇಶ್ವರನಿಗೆ ಪಂಪಾದೇವಿ ಹೆಸರಿನ ರಾಣಿಯಿದ್ದ ಸಂಗತಿ ಕಪಗಲ್ಲು ಶಾಸನದಿಂದ (ಕ್ರಿ.ಶ.೧೦೬೯) ತಿಳಿಯುತ್ತದೆ. ಆರನೇ ವಿಕ್ರಮಾದಿತ್ಯನ ರಾಣಿ ಚಂದಲದೇವಿಯು ಬಲ್ಲಟಗಿಯ ಎರಡು ಶಾಸನ (ಕ್ರಿ.ಶ. ೧೧೦೬ ಮತ್ತು ಕ್ರಿ.ಶ. ೧೧೧೬)ಗಳಲ್ಲಿ ಕಾಣಿಸಿಕೊಂಡಿದ್ದಾಳೆ. ಇದಲ್ಲದೆ ಕೃಷ್ಣದೇವರಾಯನ ಇಬ್ಬರು ರಾಣಿಯರಾದ ಚಿನ್ನದೇವಿ ಮತ್ತು ತಿರುಮಲದೇವಿಯವರ ಉಲ್ಲೇಖ ಚೀಕಲಪರ್ವಿ ಶಾಸನ (ಕ್ರಿ.ಶ.೧೫೨೧)ದಲ್ಲಿದೆ.

ಚಕ್ರವರ್ತಿಯು ತನ್ನ ಬೇರೆ ಬೇರೆ ರಾಣಿಯರಿಗೆ ಅಗ್ರಹಾರಗಳ ಮೇಲ್ವಿಚಾರಣೆ ನೋಡಿಕೊಳ್ಳಲು ನೇಮಿಸುತ್ತಿದ್ದನು ಇದರಲ್ಲಿ ಅವರ ಸುರಕ್ಷತೆಯೊಂದಿಗೆ ಸವತಿ ಮತ್ಸರದಿಂದ ಅವರನ್ನು ದೂರವಿಡುವ ಉಪಾಯವು ಅಡಗಿದಂತಿದೆ. ಶಾಸನಗಳಲ್ಲಿ ಉಕ್ತವಾದ ರಾಣಿಯರ ನೆಲೆವೀಡುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ವಿಷಯ ಮನದಟ್ಟಾಗುತ್ತದೆ. ಉದಾಹರಣೆಗೆ : ಹಿಂದೆಯೇ ನೋಡಿದಂತೆ ಚಾಲುಕ್ಯ ಎರಡನೆ ಜಯಸಿಂಹನ ಮೂವರು ರಾಣಿಯರ ಉಲ್ಲೇಖ ಮಾನ್ವಿ ತಾಲೂಕಿನ ಶಾಸನಗಳಲ್ಲಿದೆ. ಅವರಲ್ಲಿ ಸೋಮಲದೇವಿಯು ಕ್ರಿ.ಶ.೧೦೩೧ರಲ್ಲಿ ಏತಗಿರಿ(ಯಾದಗಿರಿ)ಯ ನೆಲೆವೀಡಿನಲ್ಲಿದ್ದರೆ, ಬಿಜ್ಜಲ ದೇವಿಯು ಕ್ರಿ.ಶ.೧೦೩೧ರಲ್ಲಿ ಪೊಟ್ಟಳಕೆರೆಯ ನೆಲೆ ವೀಡಿನಲ್ಲಿದ್ದಳು. ಇನ್ನು ಮಹಾದೇವಿಯು ಕ್ರಿ.ಶ.೧೦೨೨ರಲ್ಲಿ ಪುದ್ದರವಳ್ಳಿಯ (ಯುದ್ಧದ ಕಾಲಕ್ಕೆ) ನೆಲೆವೀಡಿನಲ್ಲಿದ್ದರೆ ಕ್ರಿ.ಶ.೧೦೨೯ರಲ್ಲಿ ಸೋಮಲದೇವಿಯು ಪನ್ನಿರ್ಕೆಯಪ್ಪಯಣ (ಅಪ್ಪಯಣ=ಹುದ್ಧಕಾಲ)ದ ನೆಳೆವೀಡಿನಲ್ಲಿದ್ದಳು. ಅಂದರೆ ಚಕ್ರವರ್ತಿಯು ಒಂದೊಂದು ಯುದ್ಧಕ್ಕೆ ಹೋದಾಗ ಅವನ ಜೊತೆಗೆ ಬೇರೆ ಬೇರೆ ರಾಣಿಯರು ತೆರಳುತ್ತಿದ್ದುದನ್ನು ಇವು ಸೂಚಿಸುತ್ತವೆ. ಆಗ ಉಳಿದವರು ಸುರಕ್ಷತೆಯ ದೃಷ್ಟಿಯಿಂದ ಅಗ್ರಹಾರಗಳಲ್ಲಿರುತ್ತಿರಬೇಕು. ಆದ್ದರಿಂದ ಪ್ರಾಚೀನ ಕರ್ನಾಟಕದ ಎಲ್ಲ ರಾಣಿಯರ ನೆಲೆವೀಡುಗಳನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಬೇಕಾಗಿದೆ. ಆಗ ಚಕ್ರವರ್ತಿಗಳ ಚಲನವಲನ ಮತ್ತು ರಾಣಿಯರ ವಿಭಿನ್ನ ಮನೋಧರ್ಮದ ಸೂಕ್ಷ್ಮ ಪದರುಗಳು ಅನಾವರಣಗೊಳ್ಳುವವು.

## ಸಾಮಂತರು

ವಿವಿಧ ಪರಾಂತಗಳಿಗೆ ಒಡೆಯರಾಗಿ ಆಳುತ್ತಿದ್ದವರು ಸಾಮಂತರು. ಆಳುವ ದೃಷ್ಟಿಯಿಂದ ಇವರು ಸ್ವತಮತ್ರರಾಗಿದ್ದರೂ ತಮ್ಮ ಮೇಲಿನ ಒಡೆಯರಿಗೆ ನಿಷ್ಠೆಯಿಂದ ಇರಬೇಕಾಗಿತ್ತು. ಕಾಲಕಾಲಕ್ಕೆ ಕಪ್ಪು ಕಾಣಿಕೆ ಸಲ್ಲಿಸುವುದರ ಜೊತೆಗೆ ಚಕ್ರವರ್ತಿಯ ಯುದ್ಧಕ್ಕೆ ಹೊರಟಾಗ ಸೈನ್ಯದ ನೆರವನ್ನು ಒದಗಿಸಬೇಕಾಗಿತ್ತು. ತಮ್ಮ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಮನೆಯರಾಗಿದ್ದವರು ಮಹಾ ಸಾಮಂತ ಮತ್ತು ಮಹಾ ಮಂಡಳೇಶ್ವರರಾಗಿ ಪದೋನ್ನತಿಯನ್ನು ಪಡೆಯುತ್ತಿದ್ದರು.

## ಎಡೆದೊರೆ ನಾಡಿನ ಹೈಹಯರು

ಹೈಹಯ ವಂಶದ ಒಂದು ಶಾಖೆಯು ಪ್ರಾಚೀನ ಎಡೆದೊರೆ ನಾಡನ್ನು ಆಳುತ್ತಿತ್ತು. ಈ ಶಾಖೆಯ ಮೂಲ ಪುರುಷನ ಬಗ್ಗೆ ಇಲ್ಲಿಯ ಶಾಸನಗಳು ಯಾವ ಮಾಹಿತಿಯನ್ನೂ ನೀಡುವುದಿಲ್ಲ.

ಡಾ. ಫ್ಲೀಟರು ಕೆಂಬಾವಿಯ ಕ್ರಿ.ಶ. ೧೦೫೪ರ ಶಾಸನದ ಸಹಾಯದಿಂದ ಈ ವಂಶದ ಪ್ರಾಚೀನ ಅರಸರನ್ನು ಗುರುತಿಸಲು ಪ್ರಯತ್ನಿಸಿದರೆ, ಒಂದನೆಯ ಚಂದನ ಮಗ ನಿಂಬರಸ, ಇವನ ಮಗ ಎರಡನೆಯ ಚಂದ ಈತನ ಮಗನೇ ರೇವರಸ. ಈ ರೇವರಸನ ಉಲ್ಲೇಖ ಕ್ರಿ.ಶ. ೧೦೫೪ರ ಮಾನ್ವಿ ಶಾಸನದಲ್ಲಿದೆ. ಅವನು ಎಡೆದೊರೆ ನಾಡನ್ನು ಆಳುತ್ತಿದ್ದನು.

ಮಹಾ ಮಂಡಳೇಶ್ವರ, ರೇವರಸನು, ಮಾವಡಿಗಂಢ, ಕಾರ್ತವೀರ್ಯ, ಕುಳತಿಳಕ, ಮಂಡಳೀಕ, ಭೀಮ, ರಯ, ಕಟಕ, ಮುನ್ನಿರವ, ಮೊದಲಾದ ಪ್ರಶಸ್ತಿಗಳನ್ನು ಧರಿಸಿದ್ದನು. ಅತನೂರು ಶಾಸನವು ಅವು ಎಡದೊರೆ-೨೦೦೦ ವಿಭಾಗವನ್ನು ಜೋಯಿಮರಸ (ಗೊಬ್ಬೂರು-೧೦೮೫ ಗತ್ತಿ ೧೧೯೫)ನು ಆಳಿದನು. ಬಾಗಲವಾಡ ಶಾಸನವವು (ಕ್ರಿ.ಶ. ೧೧೯೬) ಈ ವಂಶದ ಮಹಾಮಂಡಳೇಶ್ವರ ಅಯ್ಯಣದೇವನನ್ನು ಉಲ್ಲೇಖಿಸಿದೆ. ಆದರೆ ಅವನ ಆಳ್ವಿಕೆಯ ಪ್ರದೇಶವನ್ನು ಶಾಸನವು ಹೇಳಿಲ್ಲ.

## ಇತರ ಸಾಮಂತರು

ರಾಷ್ಟ್ರಕೂಡ ಮೂರನೇ ಇಂದ್ರನ ಸಾಮಂತನೊಬ್ಬನ ಅಸ್ಪಷ್ಟ ಉಲ್ಲೇಖ ಬಲ್ಲಟಗಿ (ಕ್ರಿ.ಶ. ೧೦ನೇ ಶತಮಾನದ) ಶಾಸನದಲ್ಲಿದೆ. ಅಯ್ಯಣವಾಡಿ ೩೦೦ರ ಮನ್ನೆಯ ಲೋಕಾದಿಕ್ಯ (ಬಲ್ಲಟಗಿ-೧೦೩೩) "ವಾದಿಗಾ ಗಜಕೇಸರಿ", "ಸದ್ಯೋಜಾತ" ಮೊದಲಾದ ಬಿರುದಿನ ವ್ಯಕ್ತಿ (ಬಲ್ಲಟಗಿ ೧೦೩೩)ಯ ಉಲ್ಲೇಖಗಳಿವೆ. ಮಹಾ ಸಾಮಂತ ದೊರೆವಡಿಯ ವಾಮರಸನು ಹಂಡುಗಜೀಡಿನಲ್ಲಿದ್ದಾಗ ದತ್ತಿಬಿಟ್ಟ ವಿವರವು ಮರ್ಚೇಡ ಶಾಸನ (೧೦೪೫)ದಲ್ಲಿದೆ.

ಕ್ರಿ.ಶ. ೧೧ನೇ ಶತಮಾನದ ಅತನೂರು ಶಾಸನದಲ್ಲಿ ಮಹಾ ಸಾಮಂತ – ಮನ್ನೆಯ ಅಂಗ್ಯಪರಸನ ಉಲ್ಲೇಖವಿದೆ. ಅವನು ಯಾವ ವಿಭಾಗವನ್ನು ಆಳುತ್ತಿದ್ದನೆಂಬುದು ಶಾಸನದಿಂದ ತಿಳಿಯುವುದಿಲ್ಲ. ಎಡೆದೊರೆ ನಾಡನ್ನು ಆಳುತ್ತಿದ್ದ ರೇವರಸನ ಕೆಳಗೆ ಇವನ ಉಲ್ಲೇಖವಿದೆ. ಆದ್ದರಿಂದ ಅವನು ಈ ನಾಡಿನ ಯಾವುದೋ ಒಂದು ಉಪ ವಿಭಾಗವನ್ನು ಆಳುತ್ತಿರಬೇಕು. ಚಾಲುಕ್ಯ ಎರಡನೇ ಸೋಮೇಶ್ವರನ ಸಾಮಂತ ಮಹಾ ಮಂಡಳೇಶ್ವರ ಪೆಡಕಲು ಜಟಾಜೋಳ ಭೀಮ ಮಹಾರಾಜನ ಉಲ್ಲೇಖ ದದ್ದಲ (ಕ್ರಿ.ಶ. ೧೦೭೪) ಶಾಸನದಲ್ಲಿದೆ. ಬಹುಶಃ ಅವನು ಕರ್ನೂಲ್ ಜಿಲ್ಲೆ ದ್ರೋಣಾಚಲಂ ತಾಲೂಕಿನ ಪೆಡಕಲು-೮೦೦ ವಿಭಾಗವನ್ನು ಆಳುತ್ತಿರಬೇಕು. ಇದೇ ಶಾಸನವು ಹೈಹಯ ವಂಶದ ಮಹಾಸಾಮಂತ ಮಾನುವೆಯ ಮಳೆಯಮರಸನನ್ನು ಹೆಸರಿಸಿದೆ. ಅವನು ಯಾವ ವಿಭಾಗವನ್ನು ಆಳುತ್ತಿದ್ದನೆಂದು ಶಾಸನದಿಂದ ತಿಳಿಯುವುದಿಲ್ಲ. ಈ ವಂಶದ ಚಂದರಸನ ಉಲ್ಲೇಖ ಕಲ್ಲೂರು (ಕ್ರಿ.ಶ.೧೧೯೭) ಶಾಸನದಲ್ಲಿದೆ. ಇವನ ಆಳ್ವಿಕೆಯ ಪ್ರದೇಶವು ತಿಳಿಯುವುದಿಲ್ಲ. ಇವನಿಗೆ ಅಯ್ಯಣಾದಿತ್ಯ ಎಂಬ ಬಿರುದಿದ್ದುದು ಶಾಸನದಿಂದ ತಿಳಿಯುತ್ತದೆ. ಬಹುಶಃ ಅಯ್ಯಣದೇವನ ಮಗನಾದ ಇವನು ತಂದೆಯ ನಂತರ ಅಯ್ಯಣವಾಡಿ-೩೦೦ ಪ್ರದೇಶವನ್ನು ಆಳಿರಬೇಕು.

ಹೈಹಯ ವಂಶದ ಮಹಾಮಂಡಳೇಶ್ವರ, ಘಟ್ಟಿದೇವರಸ (ಬಲ್ಲಟಗಿ-೧೧೫೧), ಮಹಾಮಂಡಳೇಶ್ವರ, ಬೂಚಿದೇವರಸರು(ಕಲ್ಲೂರು-೧೧೩೫) ಕಾಣಿಸಿಕೊಂಡಿದ್ದಾರೆ. ಇವರಲ್ಲಿ ವಿಭಾಗವನ್ನು ಆಳುತ್ತಿದ್ದನೆಂದು

ಶಾಸನ ಹೇಳಿದೆ. ಚಾಲುಕ್ಯ ಜಗದೇಕ ಮಲ್ಲನ ಕಾಲದ ಬಲ್ಲಟಗಿ ಮತ್ತು ಮಾನ್ವಿ ಶಾಸನಗಳು ಈ ವಂಶದ ಲೋಕರಸ ಮತ್ತು ಗಂಡರಾದಿತ್ಯರನ್ನು ಉಲ್ಲೇಖಿಸಿವೆ. ಇವರ ಆಳ್ವಿಕೆಯ ವಿವರಗಳು ತಿಳಿಯುವುದಿಲ್ಲ. ಹಿರೆಕೊಟ್ನೆಕಲ್ (ಕ್ರಿ.ಶ.೧೧೯೧) ಶಾಸನದಲ್ಲಿ ಮಹಾಮಂಡಳೇಶ್ವರ ಮಾನವೆ ಮೈಳುಗಿ ದೇವರಸನ ಉಲ್ಲೇಖವಿದೆ. ೧೩ನೇ ಶತಮಾನದ ಸುಂಕೇಶ್ವರ ಗ್ರಾಮದ ಎರಡು ಶಾಸನಗಳಲ್ಲಿ ಮಹಾಂಡಳೇಶ್ವರ ಮಲ್ಲಿದೇವರಸನು ಕಾಣಿಸಿಕೊಂಡಿದ್ದಾನೆ. ಇದೇ ಕಾಲದ ಗುಡಿಹಾಳ ಶಾಸನದಲ್ಲಿ ಮಹಾ ಸಾಮಂತ ದಾಸಣ್ಣ ಹೆಸರಿದೆ. ಆದರೆ ಇವರ ವೃತ್ತಗಳು ತಿಳಿಯುವುದಿಲ್ಲ.

## ಆಡಳಿತಾಧಿಕಾರಿಗಳು

ಚಕ್ರವರ್ತಿಯು ತನ್ನ ಸಾಮ್ರಾಜ್ಯದ ವಿವಿಧ ಕರ್ತವ್ಯಗಳನ್ನು ನಿರ್ವಹಿಸಲು ಮಂತ್ರಿಗಳನ್ನು ನೇಮಿಸಿಕೊಳ್ಳುತ್ತಿದ್ದನು. ಇದರಂತೆ ವಿವಿಧ ಪಾಂತ್ರ್ಯಗಳ ಅರಸರೂ ಅನೇಕ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಇವರಲ್ಲಿ ಮಹಾಸಾಮಂತಾಧಿಪತ, ಮಹಾ ಪ್ರಚಂಡ ದಂಡನಾಯಕ ಶ್ರೇಣಿಯ ಅಧಿಕಾರಿಗಳು ಚಕ್ರವರ್ತಿಯಿಂದ ನಿಯಕ್ತರಾಗಿದ್ದರು. ಕೇಂದ್ರ ಸರ್ಕಾರದಲ್ಲಿ ಸುಂಕದ ಇಲಾಖೆ, ವಿದ್ಯಾ ಇಲಾಖೆ, ರಕ್ಷಣಾ ಇಲಾಖೆ, ವಿದೇಶಾಂಗ ಇಲಾಖೆ ಮೊದಲಾದ ಬೇರೆ ಬೇರೆ ಶಾಖೆಗಳಿದ್ದವು. ಆಯಾ ಇಲಾಖೆಗಳಿಗೆ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರು ಮುಖ್ಯಸ್ಥರಾಗಿದ್ದರು.

ಕುರಡಿ ಶಾಸನದಲ್ಲಿ ಆರನ್ನೇ ವಿಶ್ವಮಾದಿತ್ಯನ ಅಧಿಕಾರಿ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಪೋತಿಮಯ್ಯನ ಉಲ್ಲೇಖ ಅತನೂರು ಶಾಸನದಲ್ಲಿದೆ. ಕಲ್ಲೂರು (ಕ್ರಿ.ಶ.೧೧೪೩) ಶಾಸನದಲ್ಲಿ ಪಟ್ಟ ಸಾಹಣೆ ಹಿರಿಯ ದಂಡನಾಯಕ ಧೀಮನಯ್ಯನ ಉಲ್ಲೇಖವಿದೆ. ಈತನ ಕೆಳಗೆ ಹೆಗ್ಗಡೆ ದಂಡನಾಯಕ ಕಾವರಾಜಯ್ಯನ ಎಡೆದೊರೆ–೨೦೦೦ವನ್ನು ಆಳುತ್ತಿದ್ದನು. ಶ್ರೀಮದಯ್ಯ ಮಹಾಪ್ರಧಾನ ದಂಡನಾಯಕನ ಉಲ್ಲೇಖ ಕುರುಡಿ (ಕ್ರಿ.ಶ.೧೧೪೮) ಶಾಸನದಲ್ಲಿದೆ. ಈತನ ಕೆಳಗೆ ಹಿರಿಯಗೊಬ್ಬುರ ಅಚ್ಚಿನ ಮೊಳೆಯ ಅಸ್ಪಷ್ಟ ಉಲ್ಲೇಖದ ನಾಯಕನಿದ್ದನು. ಆದ್ದರಿಂದ ಇವರು ಭಂಡಾರದ ಅಧಿಕಾರಿಗಳಾಗಿದ್ದರು.

"ವಸಾಯಿತ" ಹೆಸರಿನ ಅಧಿಕಾರಿಗಳಿದ್ದುದು ಶಾಸನಗಳಿಂದ ತಿಳಿಸುತ್ತದೆ. ಆದರೆ ಇವರ ಹುದ್ದೆಗಳುಗೊತ್ತಾಗುವುದಿಲ್ಲ. ಮಾನ್ವಿ ತಾಲೂಕಿನ ಶಾಸನಗಳು, ಅಧಿಷ್ಠಾಯಕ ವಸಾಯತ ಅಲ್ಲಣದೇವರಸ (ಬೇವಿನೂರು) ಅಯ್ಯಣವಾಡಿನಾಡ ಹೆಗ್ಗಡೆ ದಂಡನಾಯಕ ವಸಾಯಿತ ಸುರಗಿ ವೆಣ್ಣಮರಸ (ಕಲ್ಲೂರು ಕ್ರಿ.ಶ.೧೦೫೦)ರನ್ನು ಹೆಸರಿಸಿದೆ. ಬಹುಶಃ ಇವರು ಕೇಂದ್ರ ಸರ್ಕಾರದ ಅಧಿಕಾರಿಗಳಾಗಿರಬೇಕು.

ಇದಲ್ಲದೆ ಮಲ್ಲದೇವರಸ ಮತ್ತು ಕೊಪ್ಪರಸರು ಹೆಜ್ಜುಂಕ, ಬಿಲ್ಕೊಡೆ ಮತ್ತು ವಡ್ಡರಾವುಳ ಸುಂಕವನ್ನು ಹೈಹಯ ಬೂವನು ಅಧಿಕಾರಿಯಾಗಿ ನೋಡಿಕೊಳ್ಳುತ್ತಿದ್ದರು. ಸಿರವಾರ ಶಾಸನ (ಕ್ರಿ.ಶ.೧೧೯೬) ಪೆರ್ಗಡೆ ಮಾರಮಯ್ಯನ ಉಲ್ಲೇಖವಿದೆ. ತಂತ್ರಪಾಳ ಮಲ್ಲಯ (ಬಲ್ಲಟಗಿ–ಕ್ರಿ.ಶ.೧೦೨೨) ದಂಡನಾಯಕ ಚಾಕಿಮಯ್ಯ (ನುಗುಡೋಣಿ–೧೦೩೪) ಹೆಗ್ಗಡೆ ಚೌಡಣ್ಣ (ಕಲ್ಲೂರು–೧೧೩೫) ತಂತ್ರಪಾಳ ಗಂಗರ ಚೌಂಡಯ್ಯ (ಮಾನ್ವಿ ಕ್ರಿ.ಶ.೧೧ನೇ ಶತಮಾನ) ಮೊದಲಾದವರು ಪ್ರಾಂತೀಯ ಅಧಿಕಾರಿಗಳಾಗಿ ಕೆಲಸ ನಿರ್ವಹಿಸುತ್ತಿದ್ದರು.

## ಆಡಳಿತ ವಿಭಾಗಗಳು

ಆಡಳಿತ ಅನುಕೂಲಕ್ಕಾಗಿ ಚಕ್ರವರ್ತಿಯು ತನ್ನ ವಿಶಾಲವಾದ ಸಾಮ್ರಾಜ್ಯವನ್ನು ಅನೇಕ ವಿಭಾಗಗಳನ್ನಾಗಿ ವಿಂಗಡಿಸಿದ್ದನು. ಪ್ರಾಚೀನ ಕಾಲದಲ್ಲಿ ಅವುಗಳನ್ನು ಸಂಖ್ಯೆಯ ಮೂಲಕ ಹೆಸರಿಸಲಾಗುತ್ತಿತ್ತು. ಇವು ಆಯಾ ವಿಭಾಗಗಳು ಒಳಗೊಂಡಿದ್ದ ಗ್ರಾಮಗಳ ಸಂಖ್ಯೆಯನ್ನು ಸೂಚಿಸುತ್ತಿದ್ದವು. ಮಾನ್ವಿ ತಾಲೂಕನ್ನೊಳಗೊಂಡು ಇಂದಿನ ರಾಯಚೂರು ಜಿಲ್ಲೆಯು ಪ್ರಾಚೀನ ಎಡೆದೊರೆ-೨೦೦೦ ನಾಡಿನಲ್ಲಿ ಸಮಾವೇಸಗೊಂಡಿತ್ತು.

ಮಾನ್ವಿ ತಾಲೂಕಿನ ಶಾಸನಗಳು ಅಯ್ಯಣವಾಡಿ-೩೦೦, ಮಾರಟ-೩೦೦, ಮೊಸಳೆಕಲ್ಲು-೩೦೦, ಗೊರಿಕಲ್ಲ-೧೨, ಮುದುಗುಂದೂರು-೩೦೦, ನಿಟ್ಟರವೆ-೭೦, ವಿಭಾಗಗಳನ್ನು ಉಲ್ಲೇಖಿಸಿವೆ.

**ಅಯ್ಯಣವಾಡಿ-೩೦೦ :** ಕುರುಡಿ (ಕ್ರಿ.ಶ.೧೦೭೯) ಶಾಸನವು "ನೆಗಳ್ದಯ್ಯಣವಾಡಿ ನಾಳ್ಕಳಂ ಕ್ರಿಶಿಯೆನೆಸೆದ ರೂಡಿ ಎಂದು ಹೇಳಿದೆ. ಇಂದಿನ ದೇವದುರ್ಗ ತಾಲೂಕಿನ ಗೊಬ್ಬೂರು ಅಯ್ಯಣವಾಡಿ ಅಗ್ರಹಾರವಾಗಿತ್ತೆಂದು ಅಲ್ಲಿಯ ಶಾಸನ ಹೇಳಿದೆ. ಅಂದರೆ ಇಂದಿನ ಮಾನ್ವಿ, ರಾಯಚೂರು ಮತ್ತು ದೇವದುರ್ಗ ತಾಲೂಕಿನ ಅನೇಕ ಹಳ್ಳಿಗಳು ಈ ವಿಭಾಗದಲ್ಲಿ ಸಮಾವೇಶಗೊಂಡಿದ್ದವೆಮದು ಹೇಳಬಹುದು. ಆದರೆ ಈ ಅಯ್ಯಣವಾಡಿ ಮುಖ್ಯಪಟ್ಟಣವನ್ನು ಗುರುತಿಸಲು ಸಾಧ್ಯವಾಗಿಲ್ಲ.

**ಮೊರಟ-೩೦೦ :** ಮಾನ್ವಿ ತಾಲೂಕಿನ ಮಲ್ಲಟವು ಈ ವಿಭಾಗದ ಮುಖ್ಯ ಪಟ್ಟಣವಾಗಿತ್ತು. ಬೇವಿನೂರು, ಸಿರಿವಾರಗಳನ್ನೊಳಗೊಂಡ ಮೂರು ನೂರು ಹಳ್ಳಿಗಳು ಇದರಲ್ಲಿದ್ದವು. ಚಿನ್ನತುಂಬಳ, (ಆಂದ್ರಪ್ರದೇಶ-೧೦೮೬) ಮತ್ತು ಚಿಮ್ನಹಳ್ಳಿ, (ಹರಾನಹಳ್ಳಿ ತಾಲ್ಲೂಕು-೧೦೮೬) ಶಾಸನದಲ್ಲಿ ಈ ವಿಭಾಗದ ಉಲ್ಲೇಖವಿದೆ.

**ಮೊಸಳೆಕಲ್ಲು-೩೦೦ :** ಇಂದಿನ ದೇವದುರ್ಗ ತಾಲೂಕಿನ ಮೊಸರುಕಲ್ಲು ಗ್ರಾಮವೇ ಪ್ರಾಚೀನ ಮೊಸಳೆಕಲ್ಲು-೩೦೦ರ ಮುಖ್ಯ ಪಟ್ಟಣವಾಗಿದೆ. ನುಗಡೋಣಿ(ಕ್ರಿ.ಶ.೧೦೩೪) ಶಾಸನವು ಎಡೆದೊರೆ-೨೦೦೦ ದೊಳಗಣ ಮೊಸಳಿಕಲ್ಲು-೩೦೦ ರ ಬಳಿಯ ಭತ್ತ ಗ್ರಾಮ ಬಳ್ಳನಿಟ್ಟಿಗೆ ಎಂದು ಹೇಳಿದೆ. ಬಲ್ಲಟಗಿಯ ಶಾಸನಗಳಲ್ಲೂ (ಕ್ರಿ.ಶ.೧೦೩೬ ಮತ್ತು ಕ್ರಿ.ಶ.೧೦೫೮) ಈ ವಿಭಾಗದ ಉಲ್ಲೇಖವಿದೆ.

**ಗೋರಿಕಲ್ಲು-೧೨ :** ಇದು ಮೊಸಳೆಕಲ್ಲು-೩೦೦ ರ ಉಪವಿಭಾಗ ಕಪಗಲ್ಲು ಶಾಸನವು (ಕ್ರಿ.ಶ.೧೦೬೯) ಮೊಸಳಿಕಲ್ಲು-೩೦೦ರ ಬಳಿಯ ಕಂಪಣ ಗೋರಿಕಲ್ಲು ೧೨ರಲ್ಲಿಯ ಭತ್ತ ಗ್ರಾಮ ಕಪಗಲ್ಲು ಎಂದು ಕೇಳಿದೆ. ಇಂದಿನ ಮಾನ್ವಿ ತಾಲೂಕಿನ ಗೋರ್ಕಲ್ಲು ಗ್ರಾಮ ಪ್ರಾಚೀನ ಗೋರಿಕಲ್ಲು-೧೨ರ ಮುಖ್ಯ ಪಟ್ಟಣವಾಗಿದೆ.

ಒಟ್ಟಿನಲ್ಲಿ ದೇವದುರ್ಗ ತಾಲೂಕಿನ ಮೊಸರಕಲ್ಲು ಗ್ರಾಮವನ್ನೊಳಗೊಂಡು, ಮಾನ್ವಿ ತಾಲೂಕಿನ ಬಲ್ಲಟಗಿ ಗೋರ್ಕಲ್ಲು ಮತ್ತು ಕಪಗಲ್ಲುಗಳು ಈ ವಿಭಾಗದಲ್ಲಿ ಸಮಾವೇಶಗೊಂಡಿದ್ದವೆಂದು ಹೇಳಬೇಕಾಗುತ್ತದೆ.

**ಮುದಗುಂದೂರು-೩೦೦ :** ಕಲ್ಲೂರು ಶಾಸನ (ಕ್ರಿ.ಶ.೧೧೩೫) ದಲ್ಲಿ ಈ ವಿಭಾಗದ ಉಲ್ಲೇಖವಿದೆ. ಅದನ್ನು ಹೈಹಯ ವಂಶದ ಅರಸರು ಆಳುತ್ತಿದ್ದರು. ಚಾಲುಕ್ಯ ಒಂದನೇ ಸೋಮೇಶ್ವರನ ಕಾಲದ

ಆತನೂರು ಶಾಸನವು ಮಹಾಪ್ರಚಂಡ ದಂಡನಾಯಕ ಪೋತಿಮಯ್ಯನು ದಾನ ಬಿಡುವಾಗ ಹೈಹಯ ವಂಶದ ಆಂಗ್ಯಪರಸ ಮತ್ತು ಮುದುಗುಂದೂರು ಪಲ್ಲೇಶ್ವರ ದೇವಾಲಯದ ಸ್ಥಾನಪತಿಗಳೂ ಉಪಸ್ಥಿತರಿದ್ದರೆಂದು ಹೇಳಿದೆ. ಗೊಬ್ಬೂರು ಶಾಸನ (ಕ್ರಿ.ಶ.೧೧೮೫) ದಲ್ಲಿ. "ಗುಂಡೂರು ಮುಂನೂರರ ಬಳಿಯ ಹಳ್ಳಸಿಂಕೆ"ಯ ಉಲ್ಲೇಖವಿದೆ. ಇಲ್ಲಿಯ ತ್ರುಟಿತ ಭಾಗವನ್ನು ಮುದುಗುಂದೂರು ಎಂದು ಕಟ್ಟಿಕೊಡಬಹುದು. ಜೋಯಿಮರಸನು ಈ ವಿಭಾಗವನ್ನೊಳಗೊಂಡು ಎಡೆದೊರೆ ನಾಡನ್ನು ಆಳುತ್ತಿದ್ದನೆಂದು ಮೇಲಿನ ಗೊಬ್ಬೂರು ಶಾಸನ ಹೇಳಿದೆ.

ಇದಲ್ಲದೆ ಕೆಳವಾಡಿ ನಾಡಿನ ಉಪವಿಭಾಗವಾದ ನಿಟ್ಟರವೆ-೭೦ ಮತ್ತು ಕರಡಿಕಲ್ಲು-೩೦೦ ವಿಭಾಗಗಳ ಉಲ್ಲೇಖಗಳೂ ಇಲ್ಲಿಯ ಶಾಸನಗಳಲ್ಲಿವೆ. ಬ್ರಾಹ್ಮಣರ ಉಪಭೋಗಕ್ಕಾಗಿ ನೀಡಿದ ಅಗ್ರಹಾರಗಳ ವಿವರಗಳು ಇಲ್ಲಿಯ ಶಾಸನಗಳಲ್ಲಿವೆ. ಬ್ರಾಹ್ಮಣರು ವಿದ್ಯಾವಂತರಾಗಿದ್ದರಿಂದ ಅಗ್ರಹಾರಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳು ನಡೆಯುತ್ತಿದ್ದವು. ಕೆಲವೊಮ್ಮೆ ಇತರರು ಕಟ್ಟಿಸಿದ ಅಗ್ರಹಾರಗಳಾಗಿದ್ದವು. ಅಗ್ರಹಾರ ಮತ್ತು ದತ್ತ ಗ್ರಾಮಗಳಲ್ಲಿ ಹೆಚ್ಚಿನ ವ್ಯತ್ಯಾಸವಿರಲಿಲ್ಲ.

## ೫.೨. ಆರ್ಥಿಕ ವ್ಯವಸ್ಥೆ

### ವರ್ತಕರು ಮತ್ತು ವರ್ತಕ ಸಂಘಗಳು

ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡ ಸೆಟ್ಟಿ, ಸಿಟ್ಟಿ ಗುತ್ತೆ, ಬಣಜಿಗ, ನಖರ, ಮುಮ್ಮುರಿದಂಡ ಮತ್ತು ನಾನಾದೇಶಗಳು ವಿವಿಧ ವ್ಯಾಪಾರವನ್ನು ಮಾಡುತ್ತಿದ್ದರು. ಈ ವ್ಯಾಪಾರಿವರ್ಗದ ಸಮಾನ ವೃತ್ತಿಯವರು ಒಟ್ಟಾಗಿ ಒಂದೊಂದು ಸಂಘಗಳನ್ನು ಕಟ್ಟಿಕೊಂಡಿದ್ದರು. ಶ್ರೀವುರದಿನ್ನೂರ್ಬ್ಬರು (ಸಿರಿವಾರ) ಹನ್ನವಣ ಸಾಸಿಬ್ಬರು(ಕಲ್ಲೂರು), ಅರವತ್ತೊಕ್ಕಲು (ಗೂಗೆಬಾಳ), ಮಹಾನಾಡು-೫೦೦ ಸಂಘಗಳು ಮುಖ್ಯವಾಗಿವೆ. ಇವರು ಬೆಲ್ಲ, ಸಕ್ಕರೆ, ಸಾಸಿವೆ, ಅರಿಶಿಣ, ಜೀರಿಗೆ, ಮೆಣಸು, ಶುಂಠಿ ಮೊದಲಾದ ದಿನಸಿಗಳನ್ನು ಮಾರುತ್ತಿದ್ದರು.

ಮಾನ್ವಿ ತಾಲೂಕಿನ ಶಾಸನಗಳು ವೀಸ, ಹಾಗ, ಬೇಳೆ, ಅರೆಕಾಣೆ, ಗದ್ಯಾಣ, ಮುಪ್ಪಾಗ, ಪೊನ್ನು ಮೊದಲಾದ ನಾಣ್ಯಗಳು ಈ ಭಾಗದಲ್ಲಿ ಚಲಾವಣೆಯಲ್ಲಿದ್ದುದನ್ನು ಹೇಳಿವೆ. ಕೈ ಕಂಬ ಮತ್ತು ಪೊಕಳಗಳು ಇಲ್ಲಿಯ ಅಳತಗೆಯ ಮಾಪನಗಳಾಗಿದ್ದವು. ಸಿದ್ದಾಯ, ಬಿರಾಡಮ ಹೆಜ್ಜುಂಕ, ಬಿಲ್ಕೊಡೆ, ವಡ್ಡರಾವುಳ, ದಸವೊಂದ, ಮನೆನ್ಯತೆರೆ ಮೊದಲಾದ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು.

ದಾನದತ್ತಿಗಳನ್ನು ನೀಡುವುದಕ್ಕಾಗಿಯೇ ಇಲ್ಲಿಯ ಅನೇಕ ಶಾಸನಗಳು ಹುಟ್ಟಿಕೊಂಡಿವೆ. ಇವರೊಂದಿಗೆ ಕೆರೆ, ಬಾವಿ, ವಿದ್ಯಾಭ್ಯಾಸಗಳ ನಿರ್ವಹಣೆಗೆ ಸಹಾಯ ಮಾಡಿದ ವಿವರಗಳಿವೆ. ಆರನೇ ವಿಕ್ರಮಾದಿತ್ಯನು ಕಲ್ಲೂರು ಗ್ರಾಮವನ್ನು ಸೋಮಯಾಜಿ ಚಟ್ಟೋಪಾಧ್ಯಾಯರಿಗೆ ದಾನವಾಗಿ ನೀಡಿದ್ದಾನೆ. ಒಂದನೇ ಸೋಮೇಶ್ವರನ ರಾಣಿ ಚಾಮಲದೇವಿಯು ಕೃಷ್ಣ-ತುಂಗೆಯರ ಸಂಗಮದಲ್ಲಿ ಸ್ನಾನ ಮಾಡಿ ಬಲ್ಲಟಗಿಯಲ್ಲಿ ದತ್ತಿ ಬಿಟ್ಟಿದ್ದಾಳೆ. ಕೃಷ್ಣದೇವರಾಯನ ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿಯರು

ಕೃಷ್ಣಾ-ಭೀಮಾ ನದಿಗಳ ಸಂಗಮದಲ್ಲಿ ಸ್ನಾನ ಮಾಡಿ ಚೀಕಲಪರ್ವಿ ಗ್ರಾಮವನ್ನು ತಿರುವೆಂಗಳದಾನವಾಗಿ ಕೊಟ್ಟಿದ್ದಾರೆ. ಕೃಷ್ಣದೇವರಾಯನು ರಾಚೂರು, ಮಾನವೆ, ಅಲ್ಲಂಪುರ ಕೋಟೆಗಳನ್ನು ಗೆದ್ದು ಸ್ಮಾರಕವಾಗಿ ಈ ದಾನ ಬಿಡಲಾಗಿದೆ. ಈ ತಾಲೂಕಿನ ಬಹುತೇಕ ಶಾಸನಗಳು ಆಯಾ ಊರುಗಳಲ್ಲಿ ದೇವಾಲಯ ನಿರ್ಮಾಣದ ಮತ್ತು ಅವುಗಳಿಗೆ ದಾನ ನೀಡಿದ ವಿವರಗಳಿಂದ ಸಮೃದ್ಧವಾಗಿವೆ.

ಹೀಗೆ ಮಾನ್ವಿ ತಾಲೂಕು ಪ್ರಾಚೀನ ಕರ್ನಾಟಕದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ನಿಂತಿರುವುದು ಶಾಸನಗಳಿಂದ ತಿಳಿಯುತ್ತದೆ. ಈ ಭಾಗದ ಜನ-ಜೀವನ, ಉದ್ಯೋಗ ವ್ಯಾಪಾರ, ದಾನ-ಧರ್ಮ ಮತ್ತು ಕಾನೂನಿನ ಪರಿಚಯವಾಗುತ್ತದೆ. ಭಂಭರರು, ನಾಯಿಂದರು, ಗೊರವರು, ಕಲ್ಲುಕುಟಿಗರು ಮತ್ತು ಟಂಕಸಾಲೆಯಲ್ಲಿ ಕೆಲಸ ಮಾಡುತ್ತಿದ್ದ ಸಾಮಾನ್ಯ ಜನರು ಇಲ್ಲಿಯ ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ.

## ಕೃಷಿ ಆರ್ಥಿಕತೆ

ಮಾನ್ವಿ ತಾಲೂಕಿನಲ್ಲಿ ಶಿಲಾಯುಗದ ಜನರ ಜೀವನ ಬಹಳ ಸರಳವಾಗಿತ್ತು. ಅವರು ವಾಸಿಸುತ್ತಿದ್ದ ಗುಡಿಸಲು ಹುಲ್ಲುಸೊಪ್ಪು ಮರದ ಕೋಬೆಗಳಿಂದ ತಯಾರಿಸಲ್ಪಡುತ್ತಿದ್ದವು. ಬೇಟೆಯಡುವುದು ಕೃಷಿ ಕೆಲಸ ಹಾಗೂ ಪ್ರಾಣಿಗಳನ್ನು ಸಾಕುವುದು ಅವರ ಮುಖ್ಯ ಕಸಬು ಆಗಿತ್ತು. ಕೃಷಿ ಪದ್ಧತಿ ತುಂಬಾ ಸರಳವಾಗಿತ್ತು. ನೇಯುವುದು ಹೆಣೆಯುವುದು, ಲೋಹದ ಕೈಕಲಸ ಮಾಡುವುದು ಸಾಮಾನ್ಯವಾಗಿತ್ತು. ತಮ್ಮ ನಿತ್ಯಬಳಕೆಗೆ ಬೇಕಾಗುವ ಪಾತ್ರೆಗಳನ್ನು ಅವರು ಮಣ್ಣಿನಿಂದಲೆ ಮಾಡಿಕೊಳ್ಳುತ್ತಿದ್ದರು. ಹರವಿ, ಕೊಡ, ತತ್ರಾಣಿ, ಹೂಜಿ, ಬಟ್ಟಲು ಮತ್ತು ಮುಚ್ಚಳ ಮೊದಲಾದವುಗಳನ್ನು ಹೀಗೆ ತಯಾರಿಸಿ ಬಳಸುತ್ತಿದ್ದರು ಮೂಲತಃ ಅಲಂಕಾರ ಪ್ರೀಯರಾಗಿದ್ದರು. ಇವರು ತಾವು ತಯಾರಿಸಿದ ಮಣ್ಣಿನ ಪಾತ್ರೆಗಳ ಮೇಲೆ ಅಪರೂಪಕ್ಕೆ ಕಪ್ಪು ಮತ್ತು ನೇರಳೆ ಬಣ್ಣದ ಚಿತ್ರಗಳನ್ನು ಮರೆಯುತ್ತಿದ್ದರು. ಅವರ ಉಪಕರಣಗಳು ಬಹಪಾಲು ಕಲ್ಲಿನವು ಕೊಡಲಿ, ಉಳಿ, ಬಾಚಿ, ಚಾಕು, ಕುಡುಗೋಲು, ಮೊಳೆ, ಮೊದಲಾದವುಗಳನ್ನು ಹೀಗೆ ಕಲ್ಲಿನಿಂದಲೆ ಮಾಡಿಕೊಳ್ಳುತ್ತಿದ್ದರು. ಅವರಿಗೆ ಸ್ವಲ್ಪ ಮಟ್ಟಿಗೆ ತಾಮ್ರದ ಉಪಯೋಗ ಗೊತ್ತಿತ್ತು. ಆದರೆ ಕಬ್ಬಿಣ ಲೋಹದ ಬಗೆಗೆ ಜ್ಞಾನವಿರುವಂತೆ ಕಾಣುವುದಿಲ್ಲ. ಮುಂದೆ ಕಬ್ಬಿಣ ಶೋಧವಾದ ಮೇಲೆ ಅದರ ಉಪಯೋಗ ಬಹುಮುಖವಾಗಿ ಹೆಚಿತೆನ್ನಬೇಕು. ನಾಗರಿಕತೆ ಬೆಳೆದಂತೆ ಸಂಸ್ಕೃತಿ ವಿಕಾಸವಾದಂತೆ ಜನಜೀವನ ಸುಧಾರಿಸಿ ಸೌಲಭ್ಯಗಳು ಹೆಚ್ಚಿ ತಾಲೂಕಿನ ಇತಿಹಾಸದಲ್ಲಿ ಆರ್ಥಿಕತೆಯು ಪ್ರಮುಖ ಪಾತ್ರವನ್ನುವಹಿಸಿತು.

## ೫.೩. ಶೈಕ್ಷಣಿಕ ವ್ಯವಸ್ಥೆ

ಪ್ರಾಚೀನ ಕಾಲದ ವಿದ್ಯಾಕೇಂದ್ರಗಳೇ ಅಗ್ರಹಾರಗಳು. ಪ್ರೊ.ಡಿ.ಎಲ್.ನರಸಿಂಹಾಚಾರ್ ರವರು ಅಗ್ರ+ಆಹಾರ ಎಂಬ ಎರಡು ಪದಗಳ ಸಮಾಸವೆನ್ನುತ್ತಾರೆ. ಅಗ್ರವೆಂದರೆ ಶ್ರೇಷ್ಠ, ಆಹಾರವೆಂದರೆ ಸ್ಥಳ. ಅಗ್ರಹಾರವೆಂದರೆ 'ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ. ಒಂದೇ ತೆರನಾದ

ಮನೆಗಳನ್ನು, ಸಾಲಾಗಿ ಕಟ್ಟಿಸಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಅವರಿಗೆ ಶಿಕ್ಷಣದಲ್ಲಿ ಪ್ರೋತ್ಸಾಹ ನೀಡುವ ಕೇಂದ್ರಗಳೆಂದು ಕರೆಯಲಾಗುತ್ತಿತ್ತು. ನಮ್ಮಲ್ಲಿ ಬಹುಕಾಲದಿಂದಲೂ ಬ್ರಾಹ್ಮಣರಿಗೆ ಭೂದಾನ ನೀಡಿ ಪುಣ್ಯ ಸಂಪಾದಿಸಿಕೊಳ್ಳುವ ಹಾಗೂ ಆ ಸ್ಥಳಗಳನ್ನು ದಾಳಿ, ತೆರಿಗೆಗಳಂತಹವುಗಳಿಂದ ರಕ್ಷಿಸಿಕೊಳ್ಳಲು ಅಗ್ರಹಾರಗಳನ್ನಾಗಿ ಮಾರ್ಪಡಿಸುವ ಪರಂಪರೆಯು ಬೆಳೆದುಬಂದಿತು. ರಾಜಗುರುಗಳು, ಸಾಮಂತರರು ಹಾಗೂ ಮಹಾಮಂಡಲೇಶ್ವರರು ಅಗ್ರಹಾರಗಳನ್ನು ಗ್ರಾಮಗಳಲ್ಲಿ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಲು ಸ್ಥಾಪಿಸುತ್ತಿದ್ದರು. ಇದರಿಂದ ಪುಣ್ಯ ಲಭಿಸುತ್ತದೆ; ಇಹ–ಪರ ಲೋಕಗಳ ಶಾಂತಿ ದೊರೆಯುತ್ತದೆ ಎಂಬ ಭಾವನೆ ಇತ್ತು. ಭೂಮಿ, ಬಟ್ಟೆ, ಪಾತ್ರೆ ಮುಂತಾದ ಜೀವನದ ಅವಶ್ಯಕ ವಸ್ತುಗಳನ್ನು ದಾನವಾಗಿ ನೀಡುತ್ತದ್ದರು. ವಿದ್ವಾಂಸ ಬ್ರಾಹ್ಮಣರನ್ನು ಒಂದೆಡೆ ನೆಲೆಗೊಳಿಸಿ ವಿದ್ಯಾರ್ಜನೆಗೆ ಅವಕಾಶ ಕಲ್ಪಿಸಿದಂತಾಗುವುದಲ್ಲದೆ, ತಮ್ಮ ಆಡಳಿತದ ವ್ಯವಸ್ಥೆಯ ಅನೇಕರನ್ನು ತರಬೇತಿಗೊಳಿಸುವ ಕೇಂದ್ರವಾಗುವುದೆಂದು ಭಾವಿಸಲಾಗಿತ್ತು.

ಅಗ್ರಹಾರವು ಬ್ರಾಹ್ಮಣರ ಪೋಷಣೆಗಾಗಿ, ದಾನವಾಗಿ ನೀಡಿದ ಸ್ಥಳವಾಗಿರುತ್ತಿತ್ತಾದರೂ ಇಲ್ಲಿ ಬ್ರಾಹ್ಮಣರು ಹಾಗೂ ಇತರ ಜಾತಿಯ ಜನರೂ ನೆಲೆಸಿರಬಹುದಾಗಿತ್ತು. ಆದರೆ ಇಲ್ಲಿಯ ಉತ್ಪತ್ತಿ ಮಾತ್ರ ಬ್ರಾಹ್ಮಣರಿಗೆ ಸೇರುತ್ತಿತ್ತು. ಇವರನ್ನು 'ಮಹಾಜನ'ಗಳೆಂದು ಕರೆಯುತ್ತಿದ್ದರು. ಶಾಸನಗಳು 'ಸಾಸಿರ್ವರು', 'ವಿಪ್ರರು' ಎಂದು ಕರೆದಿವೆ. ಪಾಸಿರ್ವರು ಎಂಬುದು ಇವರು ಅಗ್ರಹಾರದಲ್ಲಿ ಒಂದು ಸಾವಿರ ಬ್ರಾಹ್ಮಣರು ನೆಲೆಗೊಳ್ಳಬಹುದಾಗಿತ್ತು ಎಂದು, ವಿಪ್ರರು ಬ್ರಾಹ್ಮಣರೇ ಆಗಿದ್ದರು ಎಂಬುದು ಸೂಚಿಸುತ್ತದೆ. ಇವರಿಗೆ ಅಗ್ರಹಾರಗಳ ಮೇಲೆ ಪ್ರಭುತ್ವವಿರುತ್ತಿತ್ತು. ಗ್ರಾಮದ ಆದಾಯವೆಲ್ಲ ಇವರಿಗೆ ಸೇರಿರುತ್ತಿತ್ತು. ಇವರು ತಪೋನಿಷ್ಠರೂ ಷಟ್ಕರ್ಮನಿಷ್ಠರೂ ಆಗಿದ್ದು, ಶಾಸ್ತ್ರಗಳಲ್ಲಿ ಪರಿಣಿತರಾಗಿರುತ್ತಿದ್ದರು. ಹೀಗಾಗಿ ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಊರಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ರಮಗಳು ಇವರ ಸಮ್ಮುಖದಲ್ಲಿಯೇ ನಡೆಯುತ್ತಿದ್ದವು.

**ಮಾನ್ವಿ ತಾಲೂಕಿನಲ್ಲಿ ಕಂಡು ಬರುವ ಅಗ್ರಹಾರಗಳು**

| ಕ್ರ.ಸಂ. | ತಾಲ್ಲೂಕು | ಅಗ್ರಹಾರದ ಹೆಸರು | ಕಾಲ |
|---|---|---|---|
| ೧. | ಮಾನ್ವಿ | ತಡಕಲ್ | ಕ್ರಿ.ಶ.೧೦೩೩ |
| | | ಕಲ್ಲೂರು | ಕ್ರಿ.ಶ.೧೦೮೦ ಮತ್ತು ಕ್ರಿ.ಶ.೧೧೩೪ |
| | | ಕುರುಡಿ | ಕ್ರಿ.ಶ.೧೧೦೦ ಕ್ರಿ.ಶ. ೧೧೯೯ ಮತ್ತು ಕ್ರಿ.ಶ.೧೧೩೪ |
| | | ರಾರಾವಿ | ಕ್ರಿ.ಶ.೧೧೩೭ |
| | | ಹಿರೇಕೊಟ್ನೆಕಲ್ಲು | ಕ್ರಿ.ಶ.೧೧೯೧ |
| | | ತುಪ್ಪದೂರು | ಕ್ರಿ.ಶ.೧೧–೧೨ನೇ ಶತಮಾನ |

| | | | |
|---|---|---|---|
| | | ಬೇವಿನಹಾಳ | ಕಾಲದಉಲ್ಲೇಖವಿಲ್ಲ |
| ೨. | ಸಿಂಧನೂರು | ದಿದ್ದಿಗಿ | ಕ್ರಿ.ಶ.೯೧೮ |
| | | ಬೆಳಗುರ್ಕಿ | ಕ್ರಿ.ಶ.೯೯೨ |
| | | ಸಾಲಿಗುಂದೆ | ಕ್ರಿ.ಶ.೧೦೬೩ |
| | | ಮುಕ್ಕುಂದು | ಕ್ರಿ.ಶ.೧೦೮೮ ಮತ್ತು ಕ್ರಿ.ಶ.೧೦೯೭ |
| | | ಒಳಬಳ್ಳಾರಿ | ಕ್ರಿ.ಶ. ೧೧೧೭ |
| | | ಬಳಗಾನೂರು | ಕ್ರಿ.ಶ.೧೧೭೫ ಮತ್ತು ಕ್ರಿ.ಶ.೧೧೮೨ |
| | | ಸಿಂಧನೂರು | ಕ್ರಿ.ಶ. ೧೨ನೇ ಶತಮಾನ |
| ೩. | ಲಿಂಗಸೂಗೂರು | ತಲೇಖಾನ್ | ಕ್ರಿ.ಶ.೧೦೩೩ |
| | | ಬನ್ನಿಗೋಳ | ಕ್ರಿ.ಶ. ೧೦೪೬ |
| | | ಮುದಗಲ್ಲು | ಕ್ರಿ.ಶ.೧೦೬೫ |
| | | ಸುಲ್ತಾನಪುರ | ಕ್ರಿ.ಶ. ೧೫೩೭ |
| ೪. | ದೇವದುರ್ಗ | ಗಬ್ಬೂರು | ಕ್ರಿ.ಶ.೧೧೧೩ |

## ಮಾನ್ವಿ ತಾಲ್ಲೂಕಿನ ಅಗ್ರಹಾರಗಳು

**೧. ತಡಕಲ್ ಅಗ್ರಹಾರ :** ತಡಕಲ್ ಗ್ರಾಮವು ಮಾನ್ವಿ ತಾಲ್ಲೂಕಿನಿಂದ ೨೫ ಕಿ.ಮೀ. ಅಂತರದಲ್ಲಿದೆ. ಇಲ್ಲಿಯ ಅಗಸಿಯ ಗೋಡೆಯಲ್ಲಿರುವ ಕ್ರಿ.ಶ.೧೦೩೩ರ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನ ಕಾಲದ ಶಾಸನದಲ್ಲಿ ಜಗದೇಕಮಲ್ಲನು ಏತಗಿರಿಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿರುವಾಗ ಆತನ ರಾಣಿ ಬಿಜ್ಜಳಾದೇವಿ ಸೂರ್ಯಗ್ರಹಣದ ದಿನದಂದು ಅಗ್ರಹಾರ ತಡಕಲ್‌ನ ದೇವಾಲಯಕ್ಕೆ ಭೂದಾನವನ್ನು ನೀಡುತ್ತಾಳೆ.

**೨. ಕಲ್ಲೂರು ಅಗ್ರಹಾರ :** ಮಾನ್ವಿಯಿಂದ ೨೦ ಕಿ.ಮೀ. ಅಂತರದಲ್ಲಿರುವ ಕಲ್ಲೂರುನಲ್ಲಿಯ ಮಾರುಟೇಶ್ವರ ದೇವಾಯಲದ ಆವರಣದ ಕಲ್ಲಿನ ಮೇಲೆ ಕೆತ್ತಲ್ಪಟ್ಟಿರುವ ಕ್ರಿ.ಶ.೧೦೮೦ರ ಶಾಸನದಲ್ಲಿರುವಂತೆ ಚಾಳುಕ್ಯರ ಅರಸ ವಿಕ್ರಮಾದಿತ್ಯನ ಮಾಂಡಳಿಕನಾದ ಬೂಚಿದೇವರಸನ ಪ್ರಧಾನ ತಂತ್ರಪಾಳನಾದ, ಕಣನು ಮತ್ತು ಹೆಗಡೆ ಚವುಡನು ಬೂಚಿದೇವನ ಅದೇಶಕ್ಕನು ಸಾರವಾಗಿ ಸರ್ವನಮಸ್ಯವ ಅಗ್ರಹಾರವಾದ ಕಲ್ಲೂರಿನ ಸ್ವಯಂಭೂ ಮಾರಟೇಶ್ವರ ದೇವರ ಹಡಪಕ್ಕೆ ೧೫ ಎಲೆ ನೀಡುವಂತೆ ನಿಗದಿ ಮಾಡುತ್ತಾರೆ. ಅಲ್ಲದೆ ಸಾಸಿರ್ವರು ದೇವರ ಹಡಪಕ್ಕೆ ಹೇರಿಗೆ ೫೦ ಎಲೆ, ಹೊರಗೆ ೨೫ ಎಲೆಯನ್ನು ದಾನ ಬಿಟ್ಟಿರುವಂತೆ ತಿಳಿಸುತ್ತದೆ.

ಇನ್ನೊಂದು ಶಾಸನ ಅದೇ ದೇವಾಲಯದ ಎಡ ಭಾಗದ ಗೋಡೆಯ ಮೇಲಿದ್ದು, ಕ್ರಿ.ಶ.೧೧೩೪ಕ್ಕೆ ಸರಿಹೋಂದತ್ತದೆ. ಆ ಸಂದರ್ಭದಲ್ಲಿ ಚಾಳುಕ್ಯರ ಅರಸ ಮೂರನೇ ಸೋಮೇಶ್ವರನು ಕಲ್ಯಾಣದಿಂದ ಆಳ್ವಿಕೆ ಮಾಡುತ್ತಿದ್ದನು. ಆತನ ಮಾಂಡಳಿಕ ಬೂಚಿದೇವನು ಸರ್ವನಮಸ್ಯದಗ್ರಹಾರ ಕಲ್ಲೂರಿನಲ್ಲಿ

ಮಹಾಜನರ ಸನ್ನಿಧಿಯಲ್ಲಿ ಮಾರುಟೇಶ್ವರ ದೇವರಿಗೆ ವಿಕ್ರಮಾದಿತ್ಯ ಭಟ್ಟಯ್ಯನಿಗೆ ನೀಡಿದ ಹೊಲದಿಂದ ಗಬ್ಬೂರು ದಾರಿಯ ಪಶ್ಚಿಮದ ಭಾಗದ ೧೨ ಮತ್ತರು ಭೂಮಿಯನ್ನು ನೀಡುತ್ತಾನೆ.

**೩. ಕುರುಡಿ ಅಗ್ರಹಾರ :** ಮಾನ್ವಿಯಿಂದ ೨೦ ಕಿ.ಮೀ. ಅಂತರದಲ್ಲಿರುವ ಕುರುಡಿ ಗ್ರಾಮವನ್ನು ಕುರ್ಡಿ ಎಂದು ಕರೆಯುತ್ತಾರೆ. ಇಲ್ಲಿರುವ ಅಗ್ರಹಾರದ ಹೆಸರು 'ರೂಢಿ' ಎಂದು. ಕುರುಡಿಯ ದೇವಾಲಯದ ಗೋಡೆಗೆ ಒರಗಿಸಿರುವ ಕಲ್ಲಿನ ಮೇಲಿನ ಕ್ರಿ.ಶ.೧೧೯೨ರ ಶಾಸನವು ಚಾಲುಕ್ಯರ ಅರಸ ತ್ರಿಭುವನಮಲ್ಲನ ಆಳ್ವಿಕೆಗೆ ಸಂಬಂಧಿಸಿದ್ದುದ್ದಾಗಿದೆ. ಪಲ್ಲವ ದೇವರ ಪೂಜೆ, ನೈವೇಧ್ಯ ಕೆಲಸಗಳಿಗೆ ಭೂಮಿಯನ್ನು ನೀಡಲಾಗಿದೆ. ಇದು ವಿದ್ವಜ್ಜನ ಎಂಬುವರಿಗೆ ನೀಡಿರುವ ಅಗ್ರಹಾರದ ಕುರಿತಾದ ವಿವರಣೆ ನೀಡುತ್ತದೆ. ಈ ವಿದ್ವಜ್ಜನರನ್ನು ಸಕಲಶಾಸ್ತ್ರ ವಿಶಾರದರು. ಶೀಲದ್ವಜಗುರುದೇವ ಪೂಜಾತತ್ಪರು, ಪವಿತ್ರ ಶರೀರಧಾರಿಗಳು, ವೇದಾಂತ ಸಮಯ ಸಮೃದ್ಧರಿಗೆ ಸರಸ್ವತಿ ಲಬ್ದವರ ಪ್ರಸಾದದು ಎಂದು ವಿವರಿಸುತ್ತದೆ.

ಇದೇ ಗ್ರಾಮದ ಚಾಗಿನೋಳಿ ದಿಡ್ಡಿಯ ಸಮೀಪದ ಕಲ್ಲಿನ ಮೇಲಿರುವ ಕ್ರಿ.ಶ.೧೧೯೯ರ ಶಾಸನದ ಪ್ರಕಾರ ಮಧುಸೂದನನು ತನ್ನ ತಂದೆ ವಾಸುದೇವನ ಹೆಸರಿನಲ್ಲಿ ವಾಸುದೇವ ದೇವಾಲಯವನ್ನು ಕಟ್ಟಿಸಿದನು. ಇದೇ ಶಾಸನದಲ್ಲಿ ಮುಂದುವರೆದು ಕ್ರಿ.ಶ. ೧೧೪೮ರಲ್ಲಿ ಸರ್ವನಮಸ್ಯದ ಅಗ್ರಹಾರ ರೂಡಿಯಲ್ಲಿ ಮಧುಸೂಧನನ ಪುತ್ರ ಮಾಚರಸನು ಮಹಾಜನಗಳಿಂದ ಭೂಮಿಯನ್ನು ಪಡೆದು. ಬೆಂಕೊಳ್ವನ ಕೋಲಿನಲ್ಲಿ ಅಳೆದು ನಾಲ್ಕು ಮತ್ತರು ಭೂಮಿಯನ್ನು ದೇವಾಲಯಕ್ಕೆ ನೀಡಿದನು. ಅಲ್ಲದೆ ಈಶ್ವರ ದೇವಾಲಯದ ಆಳ್ವಿಕೆಯ ಅವಧಿಯದ್ದಾಗಿದೆ. ಇಲ್ಲಿ ಸೋಮಭಟ್ಟೋಪಾಧ್ಯಾಯರ ಮಕ್ಕಳಾದ ನಾರಾಯಣ ಭಟ್ಟೋಪಾಧ್ಯಾಯರ ಅಗ್ರಹಾರ ರೂಡಿ (ಕುರ್ಡಿ)ಯ ಮಹಾಜನರಿಗೆ ತಿಂಗಳಿಗೆ ಹೊನ್ನ ಗದ್ಯಾಣವನ್ನು ನೀಡುತ್ತಿದ್ದನೆಂಬ ಅಂಶ ತಿಳಿಯುತ್ತದೆ.

**೪. ರಾರಾವಿ ಅಗ್ರಹಾರ :** ರಾರಾವಿಯು ಈಗ ಸಿರಗುಪ್ಪ ತಾಲೂಕಿನಲ್ಲಿದೆ. ಆದರೆ ಈ ಅಗ್ರಹಾರದ ಉಲ್ಲೇಖ, ಮಾನವಿ ತಾಲ್ಲೂಕಿನ ಕುರುಡಿ ಗ್ರಾಮದ ಈಶ್ವರ ಗುಡಿಯಲ್ಲಿರುವ ಕ್ರಿ.ಶ.೧೧೩೭ರ ಶಾಸನದಲ್ಲಿ ಉಲ್ಲೇಖಿತವಾಗಿದೆ. ಇದು ಚಾಳುಕ್ಯರ ಅರಸ ಭೂಲೋಕಮಲ್ಲನ ಆಳ್ವಿಕೆಯ ಕಾಲದ್ದಾಗಿದೆ. ಇಲ್ಲಿ ನಿಂಬಣ್ಣಯ್ಯನೆಂಬ ಮಹಾಪ್ರಧಾನನು ತನ್ನ ಮಗಳಾದ ನಾಗಲದೇವಿಗೆ ಬಳುವಳಿಯಾಗಿ ನೀಡಿದ್ದ ತೈಲಪದೇವರ ಅಗ್ರಹಾರವನ್ನು ಆಕೆಯು ರಾರಾವಿಯಲ್ಲಿ ಬಂದ ವೃತ್ತಿಯಲ್ಲಿ ಅರ್ಧವೃತ್ತಿಯನ್ನು ರೂಡಿಯ ಶಂಕರೇಶ್ವರ ಹಾಗೂ ನಾಗೇಶ್ವರ ದೇವರಿಗೆ ದಾನ ಮಾಡುವಳು.

**೫. ಹಿರೇಕೊಟ್ನೆಕಲ್ಲು ಅಗ್ರಹಾರ :** ಮಾನ್ವಿಯಿಂದ ೧೦ ಕಿ.ಮೀ. ಅಂತರದಲ್ಲಿರುವ ಹಿರೇಕೊಟ್ನೆಕಲ್ಲಿಗೆ 'ಕೊಟ್ನಕಲ್ಲು' ಎಂದು ಕರೆಯುತ್ತಾರೆ. ಇಲ್ಲಿಯ ಅಗ್ರಹಾರದ ಹೆಸರು ಕೊಟ್ಟುಕುಣುಹೆ ಎಂದು ಈ ಗ್ರಾಮದ ಬನ್ನಿಕಟ್ಟೆಯ ಮೇಲಿನ ಕ್ರಿ.ಶ.೧೧೯೧ರ ಶಾಸನವು ಚಾಳುಕ್ಯರ ಅರಸ ಸೋಮೇಶ್ವರನ ಆಳ್ವಿಕೆಯ ಕಾಲದ್ದಾಗಿದೆ. ಈತ ತನ್ನ ಭೂಮಿದಾನ ಕಾರ್ಯದಲ್ಲಿ ಇದನ್ನು ಅಗ್ರಹಾರವನ್ನಾಗಿ ಪರಿವರ್ತಿಸಿದನು. ಆಗ ನಾನಾ ಅಗ್ನಿಹೋತ್ರ, ದ್ವಿಜಗುರು ದೇವತಾ ತತ್ಪರರೂ, ಸಕಳಶಾಸ್ತ್ರ ವಿಶಾರದರೂ

ಆದ ಸರ್ವನಮಸ್ಯದ ಅಗ್ರಹಾರದ ಮಹಾಜನರ ಸನ್ನಿಧಾನದಲ್ಲಿ ಚಿಕ್ಕ ತಿಪ್ಪಣ್ಣ ಭಟ್ಟೋಪಾಧ್ಯಾಯನ ಮೊಮ್ಮಗನಾದ ಬ್ರಹ್ಮದೇವನು ತನ್ನ ಆಸ್ತಿಯಲ್ಲಿ ಚಕನಬರವಿಯಣ್ಣನು ಗಂಗದೇವನಾಯಕನ ಮಕ್ಕಳು ಬಾಗುಳಹಾಳ ಈಶ್ವರಣ್ಣನಿಂದ ಕ್ರಯಕ್ಕೆ ಪಡೆದು ಧರ್ಮಾರ್ಥಕ್ಕೆ ಮತ್ತು ಸತ್ರಕ್ಕೆಂದು ಆ ಮಹಾಜನಗಳ ಪಾದಪೂಜೆ ಮಾಡಿ ದಾನ ನೀಡಿದ ಮಾಹಿತಿ ಇದೆ.

**೬. ತುಪ್ಪದೂರು ಅಗ್ರಹಾರ :** ಈ ಗ್ರಾಮವು ಮಾನ್ವಿಯಿಂದ ೨೦ ಕಿ.ಮೀ. ಅಂತರದಲ್ಲಿದೆ. ಅಲ್ಲಿಯ ಹುಡೆದ ಮೇಲೆ ನಿಲ್ಲಿಸಿರುವ ಕಲ್ಲಿನ ಮೇಲಿನ ಕ್ರಿ.ಶ. ೧೧-೧೨ನೇ ಶತಮಾನದ ಶಾಸನವು ಚಾಳುಕ್ಯರ ೬ನೇ ವಿಕ್ರಮಾದಿತ್ಯನ ಅವಧಿಗೆ ಸೇರಿದುದಾಗಿದೆ. ಇಲ್ಲಿಯ ಅಗ್ರಹಾರ ತೆನೆಯಲ್ಲಿ ದೇವರನ್ನು ಪ್ರತಿಷ್ಠಾಪಿಸಿ, ಅಲ್ಲದೆ ಮಾಣಿಕೇಶ್ವರ ಕೋಲಲ್ಲಿ ದೇವರ ನೈವೇಧ್ಯದ ಸಲುವಾಗಿ ೪೦೦ ಕಮ್ಮ ತೋಟವನ್ನು ದಾನವಾಗಿ ನೀಡಲಾಗಿದೆ.

**೭. ಬೇವಿನಹಾಳ ಅಗ್ರಹಾರ :** ಮಾನ್ವಿಯಿಂದ ೪೦ ಕಿ.ಮೀ. ಅಂತರದಲ್ಲಿರುವ ಬೇವಿನೂರನ್ನು ಬೇವಿನಹಾಳ ಎಂದು ಕರೆಯುತ್ತಿದ್ದರು. ಇಲ್ಲಿಯ ಊರ ಹೋರಗಿನ ಪಾಳುದೇವಾಲಯದ ಎದುರಿಗಿನ ಕಲ್ಲಿನ ಮೇಲಿನ ಶಾಸನ ಕಲ್ಯಾಣದ ಚಾಳುಕ್ಯ ತ್ರಿಭುವನಮಲ್ಲನ ಕಾಲದ್ದಾಗಿದೆ. ಇದರಲ್ಲಿ ಅಣ್ಣಲದೇವ ದತ್ತಗ್ರಾಮ ಬೇವಿನಹಾಳ ಮತ್ತು ಪಿರಿಯ ಕೋಲಿನ ಉಲ್ಲೇಖವನ್ನು ಕಾಣಬಹುದು.

**ಮಾನ್ವಿ ತಾಲೂಕಿನಲ್ಲಿ ಬ್ರಹ್ಮಪುರಿಗಳು ಈ ಕೆಳಗಿನಂತಿವೆ.**

| ಕ್ರ.ಸಂ. | ತಾಲ್ಲೂಕು | ಅಗ್ರಹಾರದ ಹೆಸರು | ಕಾಲ |
|---|---|---|---|
| ೧. | ಮಾನ್ವಿ | ೧. ಬಲ್ಲಟಗಿ | ಕ್ರಿ.ಶ.೧೧೦೬ |
| | | ೨. ಅತ್ತನೂರು | ಕಾಲದ ಉಲ್ಲೇಖವಿಲ್ಲ |

## ಮಾನ್ವಿ ತಾಲ್ಲೂಕಿನ ಬ್ರಹ್ಮಪುರಿಗಳು

**೧. ಬಲ್ಲಟಗಿ ಬ್ರಹ್ಮಪುರಿ :** ಬಲ್ಲಟಗಿಯು ಮಾನ್ವಿ ತಾಲ್ಲೂಕಿನಿಂದ ೨೦ ಕಿ.ಮೀ. ಅಂತರದಲ್ಲಿದೆ. ಇಲ್ಲಿಯ ಬ್ರಹ್ಮಪುರಿಯನ್ನು ಬಳ್ಳನಿಟ್ಟಿಗೆ ಎಂದು ಕರೆಯುತ್ತಿದ್ದರು. ಇಲ್ಲಿಯ ಮಸೀದಿಯ ಸಮೀಪದಲ್ಲಿ ನಿಲ್ಲಿಸಿರುವ ಕಲ್ಲಿನ ಎಡಭಾಗದ ಮೇಲಿರುವ ಕ್ರಿ.ಶ.೧೧೦೬ರ ಶಾಸನವು ಚಾಂದಲದೇವಿಯು ಬ್ರಹ್ಮಪುರಿಯ ಹೊಲ್ಲಿಮಯ್ಯ ಹಾಗೂ ಮಲ್ಲಯ್ಯನಿಗೆ ಬಳ್ಳನಿಟ್ಟಿಗೆಯಲ್ಲಿ ಭೂಮಿ ಹಾಗು ಸ್ಥಳವನ್ನು ದಾನವಾಗಿ ನೀಡಿದ ವಿವರವಿದೆ.

**೨. ಅತ್ತನೂರು ಬ್ರಹ್ಮಪುರಿ :** ಅತ್ತನೂರು ಮಾನ್ವಿಯಿಂದ ೩೫ ಕಿ.ಮೀ. ಅಂತರದಲ್ಲಿದೆ. ಇದನ್ನು ಅತ್ನೂರು ಆತನೂರು ಎಂದು ಕರೆಯುತ್ತಾರೆ. ಇಲ್ಲಿಯ ಈಶ್ವರ ದೇವಾಲಯದ ಮೆಟ್ಟಲಿಗೆ ಸೇರಿರುವ ಕಲ್ಲಿನ ಮೇಲಿನ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಈ ಶಾಸಸನವು ಕಲ್ಯಾಣದ ಚಾಳುಕ್ಯರ ಅರಸ ತ್ರೈಲೋಕ್ಯಮಲ್ಲನ ಮಹಾಮಂಡಳೇಶ್ವರ ದೇವರಸನು ಎಡೆದೊರೆ-೨೦೦೦ವನ್ನು ಆಳುತ್ತಿದ್ದನು. ಈತ ಮುದುಗುಂದೂರು ಪಲ್ಲೇಶ್ವರ ದೇವರ ಸ್ಥಾನಾಧಿಪತಿ ಸಾಧ್ಯಶಿವಪಂಡಿತಾಚಾರ್ಯರು ಸೇರಿ ದಂಡನಾಯಕ ಪ್ರೋತಿಮಯ್ಯನು ಜಕ್ಕರಸನ ಪ್ರಭುಸ್ವಾಮ್ಯದಲ್ಲಿ ಬ್ರಹ್ಮಪುರಿಗೆ ದಾನವನ್ನು ನೀಡಿದ್ದಾನೆ.

### ೫.೪. ಸಾಂಸ್ಕೃತಿಕ ಆಚರಣೆಗಳು :

ಹಬ್ಬಗಳು ಮಾನವನ ಬದುಕಿನ ಒಂದು ನಾಣ್ಯದ ಎರಡು ಮಗ್ಗಲುಗಳು ಸುಖ ಸಂತೋಷದ ಜೊತೆಗೆ ಖರ್ಚಿನ ಅನುಭವಾಗುತ್ತದೆ. ಅದಕ್ಕೆ ಕವಿಗಳು ಹೇಳಿರುವುದು ಬದುಕು ಜಟಕಾಬಂಡಿ ಎಂದು ಇವುಗಳನ್ನು ಪ್ರದೇಶಿಕವಾಗಿ ಜನಾಂಗೀಯವಾಗಿ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಹಲವು ಹತ್ತು ಬಗೆಗಳಲ್ಲಿ ಕಂಡು ಕೊಳ್ಳುವಾಗ ಅವು ಗತಕಾಲದ ಚರಿತೆಯನ್ನು ಬಿಂಬಿಸುತ್ತವೆ. ಒಂದು ನಾಡಿನ ಇಲ್ಲವೆ ಒಂದು ಪ್ರದೇಶದ ಅಥವಾ ಆ ಭಾಗದ ಅವಿನಾಭಾವ ಸಂಬಂಧವನ್ನು ಈ ಆಚರಣೆಗಳು ಹೇಳುವಾಗ ಅಂಥ ಆಚರಣೆಗಳು ಹಬ್ಬಗಳಾಗಿ ಸಮಾಜದಲ್ಲಿ ಸಾರ್ವತ್ರಿಕವಾಗಿ ನಿಂತ ಕತೆ ಗೊತ್ತಾಗುತ್ತದೆ.



ಇತಿಹಾಸದ ಪ್ರಮಾಣಭೂತವಾದ ಪುನರ್‌ನಿರ್ಮಾಣಕ್ಕೆ ಇರುವ ಅತೀ ಪ್ರಮುಖವಾದ ಆಧಾರಗಳೆಂದರೆ ಶಾಸನಗಳು. ಕನ್ನಡಸಾಹಿತ್ಯ, ಕಲಾಕೃತಿಗಳು, ನಾಣ್ಯಗಳು, ಪರದೇಶದ ಯಾತ್ರಿಕರ ವರದಿಗಳು, ಭೂಮಿಯ ಅಗೆತದಿಂದ ಹೊರಬಿದ್ದ ಅಂಶಗಳು ಇವೆಲ್ಲವೂ ಸಹಾಯಕವಾದರೂ, ಕರ್ನಾಟದಕ ರಾಜಕೀಯ ಸಾಮಾಜಿಕ ಪರಂಪರೆಯನ್ನು ತಿಳಿಯುವಂತಾದುದು ಮುಖ್ಯವಾಗಿ ಶಾಸನಗಳೆಂದಲೇ. ಇದರ ಆಧಾರಗಳಿಂದ ತುಂಬಿಕೊಡಲಾಗದ ಕೆಲ ಅಂಶಗಳನ್ನು ಈ ಶಾಸನಗಳು ಒದಗಿಸಿಕೊಟ್ಟಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಕರ್ನಾಟಕವು ಹಲವು ಸಂಸ್ಕೃತಿಗಳ ನಾಡು. ಹಾಗೆ ಇದರ ಇತಿಹಾಸವು ಅನೇಕ ವೈಶಿಷ್ಟ್ಯತೆಗಳಿಂದಲೂ ಕೂಡಿದೆ. ಪ್ರಾಚೀನ ಇತಿಹಾಸವನ್ನು ಗಮನಿಸಿದಾಗ, ಇದು ತನ್ನದೇ ಆದ ರಾಜವೈಭವವನ್ನು ಮೆರೆದು ಇಂದು ಜಗತ್ತಿನ ಇತಿಹಾಸದಲ್ಲಿ ತನ್ನ ಇರುವನ್ನು ಗುರುತಿಸಿ ಕೊಂಡಿದೆ. ಕರ್ನಾಟಕದಲ್ಲಿರುವ ಪ್ರತಿಯೊಂದು ಗ್ರಾಮ, ಊರು, ಹಳ್ಳಿ, ಪಟ್ಟಣ, ನಗರಗಳು ತನ್ನದೇ ಆದಂಥ ಇತಿಹಾಸವನ್ನು ಹೊಂದಿದೆ. ಜೊತೆಗೆ ಪ್ರಾದೇಶಿಕ ಭಿನ್ನತೆಯಲ್ಲಿ ಹಲವು ಆಚರಣೆ, ಧರ್ಮ, ಜನರ ಜೀವನ ವಿಧಾನವನ್ನು ಸಹ ಕಾಣುತ್ತೇವೆ. ಇಂಥ ನಾಡಾದ ಕರ್ನಾಟಕದಲ್ಲಿ 'ಮಾನವಿ' ಇತಿಹಾಸದ ದೃಷ್ಟಿಯಿಂದ ಅತ್ಯಂತ ಪ್ರಾಚೀನ ಕಾಲದಿಂದಲೂ ಇದರ ಗತವನ್ನು ಅರಿಬಹುದು.

ಇತಿಹಾಸದ ಗತವೈಭವವನ್ನು ಮೆಲುಕು ಹಾಕುತ್ತಾ ಸುಸ್ಥಿತಿಯಲ್ಲಿರುವ ಶಾಸನಗಳು, ದೇವಾಲಯಗಳು. ಅದ್ಭುತ ಶಿಲ್ಪಗಳಿಂದ ಕೂಡಿದ ದೇಗುಲದ ಗೋಡೆಗಳು ವೀರಗಲ್ಲುಗಳು, ಕೋಟೆ–ಕೊತ್ತಲಗಳು, ಪೊಕ್ರಾಣಿ, ಮಂಟಪ, ಸೇತುವೆ, ಸ್ತಂಭ, ಕೆರೆ, ಅಗ್ರಹಾರ, ಬಾವಿ, ಮುಂತಾದವುಗಳು ಮಾನವಿ ಗತದ ಇತಿಹಾಸವನ್ನು ಸಾರುವ ಪ್ರತೀಕಗಳಿಗಾವೆ. ಮಾನವಿಯ ಇತಿಹಾಸವನ್ನು ಮತ್ತು ವೈಭವದ ಸಂಸ್ಕೃತಿಯನ್ನು ತಿಳಿಸುವಲ್ಲಿ ಶಾಸನಗಳು, ದೇವಾಲಯಗಳು, ಐತಿಹ್ಯಗಳು, ದಂತಕಥೆಗಳು, ಗ್ರಾಮಗಳ

ಬಗೆಗಿರುವ ನಿಷ್ಪತ್ತಿಗಳು ಪ್ರಮುಖವಾದ ಆಕರಗಳಾಗಿವೆ. ಇವುಗಳು ಕಲೆಗೆ ದೊರೆತ ಪ್ರೋತ್ಸಾಹವನ್ನು, ಕಲಾಶೈಲಿಯನ್ನು ಹಾಗೂ ಧಾರ್ಮಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ಇದಲ್ಲದೆ, ಧಾರ್ಮಿಕವಾಗಿ ಇತರೆ ಸಾಮಾಜಿಕ ಕಾರ್ಯಗಳಿಗೆ ಅಂದಿನ ರಾಜರು, ಸಾಮಂತರು, ದಂಡನಾಯಕರು ಹಾಗೂ ಇತರ ವ್ಯಕ್ತಿಗಳು ನೀಡಿದ ದಾನ-ದತ್ತಿಯ ಮಹತ್ವವನ್ನು ನಾವು ಶಾಸನಗಳ ಆಧಾರದಿಂದ ಕಂಡುಕೊಳ್ಳಬಹುದಾಗಿದೆ.

ದೇವಾಲಯ ವಾಸ್ತುಕಲೆ ಮತ್ತು ಮೂರ್ತಿಶಿಲ್ಪ ಕೋಟೆ-ಕೊತ್ತಲಗಳು ವಾಸ್ತುನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಇವುಗಳ ಇಂದಿನ ಸ್ಥಿತಿಯನ್ನು ವಿವರಿಸುತ್ತಾ ದೇವಾಲಯಗಳು ಅಂದಿನ ಕಾಲದ ಧಾರ್ಮಿಕ ಮಹತ್ವವನ್ನು ಸಾರುವದಷ್ಟೇ ಅಲ್ಲದೇ ಅವು ಕಲೆಯ ಮಹತ್ವವನ್ನು ಬಿಂಬಿಸುವ ಭಕ್ತಿಯ ಕೇಂದ್ರಗಳಾಗಿದ್ದವು. ಕಣ್ಮರೆಯಾಗುತ್ತಿರುವ ಅಂದಿನ ಕಾಲದ ವಾಸ್ತು ಶಿಲ್ಪವನ್ನು ಮತ್ತು ಮೂರ್ತಿಶಿಲ್ಪವನ್ನು ವಿವರಿಸುವ ಮುಖಾಂತರ ದೇವಾಲಯಗಳನ್ನು ಪರಿಚಯಿಸಿ ಅವುಗಳ ಮಹತ್ವವನ್ನು ಪ್ರಸ್ತುತಪಡಿಸುವುದಾಗಿದೆ.

ರಕ್ಷಣೆಗಾಗಿ ಮುಡುಪಾಗಿಟ್ಟಿರುವಂತದ್ದೇ ಕೋಟೆ. ಇದು ಸೈನಿಕರಿಂದ ರಕ್ಷಿತವಾದ ದೊಡ್ಡ ಸ್ಥಳವಾಗಿತ್ತು. ಇದು ಅಂದಿನ ಕಾಲದ ಜನರ ಜೀವನ ರಕ್ಷಣೆಯ ಜೊತೆಗೆ ಸಂಪಾದಿಸಿದ ಸಂಪತ್ತನ್ನು ಸಂರಕ್ಷಿಸಿಕೊಳ್ಳಲು ಮತ್ತು ಇತರ ಕ್ರೂರಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಕೋಟೆಯನ್ನು ಕಟ್ಟುತ್ತಿದ್ದರು. ನಂತರ ಕಾಲದಲ್ಲಿ ಅರಸರು ಕೂಡ ರಕ್ಷಣೆಗಾಗಿ ಕೋಟೆಯನ್ನು ಮಾರ್ಪಡಿಸಿಕೊಂಡಿದ್ದರೆಂಬುದನ್ನು ವಿವರವಾಗಿ ಚರ್ಚಿಸಲಾಗಿದೆ.

ಮಾನ್ವಿ ತಾಲೂಕಿನಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡಾಗ ಪ್ರಮುಖವಾಗಿ ಭೌಗೋಳಿಕ ಪರಿಸರ, ವಾಯುಗುಣ, ಅಲ್ಲಿಯ ಪ್ರಕೃತಿ ಗ್ರಾಮದ ವಿಶೇಷತೆಗಳನ್ನು ಹಾಗೂ ಮಾನ್ವಿ ತಾಲೂಕಿನ ವಿವಿಧ ಗ್ರಾಮಗಳ ಪದನಿಷ್ಪತ್ತಿಯಲ್ಲಿ ಪ್ರಕೃತಿಯ ಪಾತ್ರ ತುಂಬಾ ಮಹತ್ವದ್ದಾಗಿದೆ. ಇಲ್ಲಿಯ ಕೆಲವು ಗ್ರಾಮಗಳು ಪುರಾತತ್ವ ನೆಲೆಗಳಾಗಿದ್ದು, ಅವುಗಳನ್ನು ಆಧಾರವಾಗಿಟ್ಟುಕೊಂಡು ತಾಲೂಕಿನ ಪ್ರಾಚೀನತೆಯನ್ನು ತಿಳಿಯಲು ಯತ್ನಿಸಲಾಗಿದೆ. ಇಲ್ಲಿನ ಗ್ರಾಮಗಳು ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾಕೇಂದ್ರಗಳಾಗಿದ್ದವು. ಎಂಬುದನ್ನು ತಿಳಿಸುವ ಶಾಸನಗಳು ಮತ್ತಿತರ ಗ್ರಂಥಗಳ ಆಧಾರಗಳ ಮೂಲಕ ಇಲ್ಲಿ ಅಧಿಕಾರವರ್ಗದವರು ಅಲ್ಲದೆ ಇತರ ವರ್ಗದ ಜನರು ಅಧಿಕಾರ ನಡೆಸುತ್ತಿದ್ದರೆಂಬುದನ್ನು ವಿವರವಾಗಿ ತಿಳಿಸಲಾಗಿದೆ.

ಇತಿಹಾಸದ ಶ್ರೀಮಂತ ಬೇರುಗಳೆಂದರೆ, 'ಸಂಸ್ಕೃತಿ' 'ಆಚರಣೆ'ಗಳು ದೇಶಿಯ ಸೊಗಡು ನೆಲೆಗೊಂಡಿರುವುದು ಹಳ್ಳಿಗಳಲ್ಲೇ ಇದನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಗತಕಾಲದ ಅರಿವು ವರ್ತಮಾನಕ್ಕೆ ಇದ್ದರೆ, ಅದು ದಾರಿದೀವಿಗೆಯಂತೆ ಮುಂದಿನ ಪೀಳಿಗೆಯವರಿಗೆ ಉಳಿಸಿಕೊಂಡು, ಬೆಳೆಸಿಕೊಂಡು ಬಂದಿದೆ. ಶಾಸನಗಳು ಇತಿಹಾಸ ರಚಿಸುವ ಕರಲಸವೊಂದೇ ಅಲ್ಲದೇ ಅಂದಿನ ನಾಗರೀಕತೆಯ ಕಥೆಯನ್ನು ಎತ್ತಿ ತೋರಿಸುವಲ್ಲಿ ಅಪೂರ್ವ ಕೊಡುಗೆಗಳಾಗಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಶಾಸನದ ವಿವಿಧ ಮುಖಗಳಗಳನ್ನು ಪರಿಚಯಸುವುದರ ಮೂಲಕ ಪ್ರಾಚೀನ ಗತಕಾಲದ ವೈಭವದ ಮೇಲೆ ಬೆಳಕು ಚಲ್ಲುವುದರ ಜೊತೆಗೆ ಪ್ರಸ್ತುತ ಅಧ್ಯಯನದ ಇತಿಮಿತಿಗಳನ್ನು ಆಕಾರಗಳನ್ನು ಸಂಗ್ರಹಿಸಿ ವಿಷಯವನ್ನು ವಿಶ್ಲೇಷಿಸಿ ಸಂಯೋಜಿಸಲಾಗಿದೆ.

ಮಾನ್ವಿ ತಾಲೂಕಿನ ಕೆಲವು ಸುಂದರ ಕೆತ್ತನೆಯ ದೇವಾಲಯಗಳು ಇಂದು ಜೂಜಾಟಗಳ ತಾಣಗಳಾಗಿರುವುದು ಕಂಡುಬರುತ್ತದೆ. ಇನ್ನು ಕೆಲವು ದೇವಾಲಯಗಳು ಅವಸಾನದ ಅಂಚಿನಲ್ಲಿವೆ. ಅಲ್ಲಿಯ ಜನರು ಕೆಲ ವೀರಗಲ್ಲುಗಳನ್ನು ತಮ್ಮ ಮನೆಯ ಸುತ್ತ ವಿಶೇಷ ಕಾಣಲೆಂದು ಸಿಮೆಂಟ್ ಗೋಡೆಗಳಿಗೆ ಜೋಡಿಸಿದ್ದಾರೆ. ಇನ್ನೂ ಕೆಲವು ಕಸದ ತಿಪ್ಪೆಗುಂಡಿಯಲಿ ಮುಚ್ಚಿಹೋಗಿವೆ. ಇದರಿಂದ ಕಂಡುಬರುವುದೇನೆಂದರೆ, ಗ್ರಾಮಸ್ಥರು ತಮ್ಮ ಅಜ್ಞಾನದಿಂದಾಗಿ ಇತಿಹಾಸವನ್ನು ಮರೆಮಾಚುವ ಕೆಲಸ ಮಾಡುತ್ತಿದ್ದಾರೆ ಹೊರತು, ಸಂರಕ್ಷಿಸುವ ಕೆಲಸ ಮಾಡುತ್ತಿಲ್ಲ. ಇದರ ಬಗ್ಗೆ ಪುರಾತತ್ವ ಇಲಾಖೆಯೂ ಕಾಳಜಿವಹಿಸುತ್ತಿಲ್ಲ. ಗ್ರಾಮಸ್ಥರಿಗೆ ತಿಳುವಳಿಕೆಯ ಜ್ಞಾನ ಮೂಡಿಸುತ್ತಿಲ್ಲ. ನಮ್ಮ ಜನರಿಗೆ ಈ ಅಂಧಕಾರದಲ್ಲಿರುವುದರಿಂದ, ಇತಿಹಾಸಪ್ರಜ್ಞೆ ಇಲ್ಲವಾಗಿರುಲು ಕಾರಣವಿರಬಹುದಾಗಿದೆ. ಶಾಸನಗಳು, ಕೋಟೆ–ಕೊತ್ತಲಗಳನ್ನು ರಕ್ಷಿಸುವ ಹೊಣೆ ಪ್ರತೀ ಗ್ರಾಮದ ಗ್ರಾಮಸ್ಥರ ಕರ್ತವ್ಯವಾಗಿದೆ. ಪಾಳು ಬಿದ್ದಿರುವ ನಶಿಸುತ್ತಿರುವ ಸ್ಮಾರಕಗಳನ್ನು ಮತ್ತೆ ರಕ್ಷಿಸಿ ಮುಂದಿನ ಜನಾಂಗಕ್ಕೆ ಉಳಿಸಿಕೊಡುವ ಹೊಣೆ ಪ್ರತಿಯೊಬ್ಬರದ್ದಾಗಿದೆ.

ಪ್ರತಿಯೊಂದಕ್ಕೂ ಮೂಲ–ಅಂತ್ಯ ಎನ್ನುವುದು ಇರುವ ಹಾಗೇನೆ ಪುರಾತತ್ವಸ್ಮಾರಕಗಳಿಗೆ ಮೂಲ ಕಾರಣ, ಅರಸರು, ಸಾಮಂತರು, ಮಾಂಡಳಿಕರು, ರಾಣಿಯರು, ಜನಸಾಮಾನ್ಯರು ಆಗಿದ್ದಾರೆ. ಇವುಗಳ ಅಂತ್ಯಕ್ಕೆ ತಿಳುವಳಿಕೆ ಪ್ರಜ್ಞೆ ಇಲ್ಲದ ಗ್ರಾಮಸ್ಥರೇ ಆಗಿದ್ದಾರೆ ಎಂಬುದು ಸತ್ಯಕ್ಕೆ ಸಮೀಪವಾದುದು. ನನ್ನ ಸಂಶೋಧನೆಯಲ್ಲಿ ಕೆಲವು ಶಾಸನಗಳನ್ನು ಉದಾಹರಿಸುವುದಕ್ಕಿಂಥ ಹೆಚ್ಚಾಗಿ ಏನನ್ನೂ ಮಾಡಲಾಗಿಲ್ಲ. ಈ ಅಧ್ಯಯನ ಸಂಶೋಧನಾಸಕ್ತರಿಗೆ ಸಾಹಿತ್ಯಾಭ್ಯಸಿಗಳಿಗೆ ಸಂಶೋಧನೆಯನ್ನು ಕೈಗೊಳ್ಳಲು ಬಹಳಷ್ಟು ವಿಷಯಗಳನ್ನು ಒಳಗೊಂಡಿದೆ ಎನ್ನಬಹುದು. ಕೊನೆಯದಾಗಿ ಹೇಳಬೇಕೆಂದರೆ ಇತಿಹಾಸ ಸ್ಮಾರಕಗಳನ್ನು ಉಳಿಸಿ ಸಂಸ್ಕೃತಿಯನ್ನು ಬೆಳಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.



## ಅನುಬಂಧ

೧. ಗ್ರಂಥಸೂಚಿ

೨. ಛಾಯಾ ಚಿತ್ರಗಳು

೩. ಮಾನ್ವಿ ತಾಲೂಕಿನ ನಕ್ಷೆ

# ಆಧಾರ ಗ್ರಂಥಗಳು

೧. ಅಪರ್ಣ ಕೂ.ಸ. ೧೯೯೯; ದೇವಾಲಯ ವಾಸ್ತುಶಿಲ್ಪ ಪರಿಚಯ; ಕನ್ನಡ ವಿಶ್ವವಿದ್ಯಲಯ, ಹಂಪಿ.

೨. ಆಲೂರು ವೆಂಕಟರಾಯ; ೧೯೮೩; ಕರ್ನಾಟಕದ ಗತವೈಭವ, ನಿರ್ದೇಶಕರು ಸರಕಾರಿ ಮುದ್ರಣಾಲಯ, ಬೆಂಗಳುರು.

೩. ಕಲಬುರ್ಗಿ ಎಂ.ಎಂ.; ೧೯೯೫; ಸಮಾಧಿ–ಬಲಿದಾನ–ವೀರಮರಣ–ಸ್ಮಾರಕಗಳು; ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೪. ಕೃಷ್ಣಕುಮಾರ ಸಿ.ಪಿ.;೧೯೯೩; ಶಾಸನಶಾಸ್ತ್ರ ಪ್ರವೇಶ; ಚೇತನ ಬುಕ್‌ಹೌಸ್, ಮೈಸೂರು.

೫. ಕೃಷ್ಣರಾವ್ ಮತ್ತು ಕೇಶವಭಟ್ ಎಂ.; ೧೯೭೦; ಕರ್ನಾಟಕ ಇತಿಹಾಸ ದರ್ಶನ; ಕರ್ನಟಕ ಸರಕಾರಿ ಮಂದಿರ, ಬೆಂಗಳೂರು.

೬. ಕೊಟ್ರೇಶ್. ಎಂ.; ೨೦೦೩; ಕೋಟೆ–ಕೊತ್ತಲಗಳ: ಒಂದು ಅಧ್ಯಯನ (ಬಳ್ಳಾರಿ); ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಕೊಪ್ಪ ಎಸ್.ಕೆ.; ೧೯೯೦; ತರ್ದವಾಡಿನಾಡು ಒಂದು ಅಧ್ಯಯನ; ಸಂಗಣ್ಣ ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ.

೮. ಗುರವ ಆರ್.ಎನ್.; ೧೯೭೪; ತರ್ದವಾಡಿನಾಡು; ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯. ಗಿರಿಜಾ ಟಿ.; ದಾವಣಗೆರೆ ಇದು ನಮ್ಮ ಜಿಲ್ಲೆ; ಸಹಕಾರಿ ಪ್ರಕಾಶನ, ದಾವಣಗೆರೆ

೧೦. ಚನ್ನಬಸಪ್ಪ ಪಾಟೀಲ ಎಸ್.; ೧೯೯೧; ಕರ್ನಾಟಕದ ಕೋಟೆಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಚನ್ನಬಸಪ್ಪ ಹಿರೇಮಠ; ೨೦೦೦; ಎಡೆದೊರೆ ನಾಡು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಚಿದಾನಂದಮೂರ್ತಿ ಎಂ; ೧೯೮೨; ವೀರಗಲ್ಲು ಮತ್ತು ಮಾಸ್ತಿಗಲ್ಲು; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೩. ಚನ್ನಕ್ಕ ಎಲಿಗಾರ; ೨೦೦೦; ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪. ಚಂದ್ರಶೇಖರಯ್ಯ ಬಿ.ಎಂ; ೨೦೦೫; ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಪರೆ; ಸಿವಿಜಿ ಪಬ್ಲಿಕೇಷನ್, ಬೆಂಗಳೂರು

೧೫. ಚಿದಾನಂದಮೂರ್ತಿ ಎಂ; ೨೦೦೨; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ; ಸ್ವಪ್ನಬುಕ್ ಹೌಸ್, ಬೆಂಗಳೂರು.

೧೬. ತಿಪ್ಪೇರುದ್ರಸ್ವಾಮಿ ಎಚ್; ೨೦೦೧; ಕರ್ನಾಟಕ ಸಂಸ್ಕೃತಿ ಸಮೀಕ್ಷೆ; ಡಿವಿಕೆ ಮೂರ್ತಿ, ಪ್ರಕಾಶನ, ಮೈಸೂರು.

೧೭. ನಾಗಭೂಷಣ ಸಿ; ೨೦೦೨; ಸಾಹಿತ್ಯ ಸಂಸ್ಕೃತಿ ಹುಡುಕಾಟ; ಅಮೃತ ವಾರ್ಷಿಕ ಪ್ರಕಾಶನ, ನಂದಿಹಳ್ಳಿ, ಸಂಡೂರು.

೧೮. ನಾಗಭೂಷಣ ಸಿ; ೨೦೦೫; ಶಾಸನಗಳು ಮತ್ತು ಕನ್ನಡ ಸಾಹಿತ್ಯ; ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೯. ನಾಗಯ್ಯ ಜೆ.ಎಂ; ೨೦೦೨; ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ; ಲೋಹಿಯಾ ಪ್ರಕಾಶನ, ಬಳ್ಳಾರಿ.

೨೦. ನಾಗಯ್ಯ ಜೆ.ಎಂ; ೧೯೯೨; ಆರನೇ ವಿಕ್ರಮಾದಿತ್ಯನ ಕಾಲದ ಶಾಸನಗಳು ಒಂದು ಅಧ್ಯಯನ; ವೀರಶೈವ ಅಧ್ಯಯನ ಅಕಾಡೆಮಿ, ಬೆಂಗಳೂರು.

೨೧. ಧನವಂತ ಹಾಜವಗೋಳ; ೨೦೦೪; ಮುಳಗುಂದ ನಾಡು ಒಮದು ಅಧ್ಯಯನ; ಮಹಾದೇವಿ ಪ್ರಕಾಶನ, ಧಾರವಾಡ.

೨೨. ಪ್ರಭಾಕರ್. ಎಂ.ಎನ್; ೨೦೦೦; ದೇವಾಲಯ ವಾಸ್ತುಚಂದ್ರಿಕೆ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಭಗವತಿ ಎಚ್.ಎಸ್. ಮತ್ತು ಮೇಲಿನಮನಿ ಎಚ್.ಎಸ್; ೨೦೦೪; ಶಾಸನಗಳ ಅಧ್ಯಯನ; ವಿಧ್ಯಾನಿಧಿ ಪ್ರಕಾಶನ, ಗದಗ.

೨೪. ಬರಗೂರು ರಾಮಚಂದ್ರಪ್ಪ (ಸಂ); ೨೦೦೩; ಕರ್ನಾಟಕ ಸಂಗಾತಿ; ಕರ್ನಾಟಕ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

೨೫. ರಾಮಚಂದ್ರ (ಸಂ); ೨೦೦೪; ವನಸಿರಿ; ಅಲೂಕು ಕನ್ನಡ ಸಾಹಿತ್ಯ ಪರಿಷತ್, ಮಾನವಿ.

೨೬. ರವೀಂದ್ರನಾಥ ಕ; ೨೦೦೩; ಕನ್ನಡ ದಾಖಲು ಸಾಹಿತ್ಯ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ರಾಮಚಂದ್ರರಾವ್ ಎಸ್.ಕೆ; ೧೯೭೫; ಮೂರ್ತಿಶಿಲ್ಪದ ನೆಲೆ ಹಿನ್ನೆಲೆ; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

# ಛಾಯಾಚಿತ್ರಗಳು



ಮಲ್ಲಟ ಗ್ರಾಮದ ಅಲ್ಲಮಪ್ರಭು
ದೇವಾಲಯ ಮುಂದಿರುವ ಶಾಸನ



ಕೊಟ್ನೆಕಲ್ ಗ್ರಾಮದ ಬನ್ನಿಗಿಡದ ಹತ್ತಿರವಿರುವ ಶಾಸನ



ಮಲ್ಲಟದ ಅಲ್ಲಮಪ್ರಭು ಗುಡಿಯ ಮುಂದಿನ ಶಾಸನ



ಬೊಗಾವತಿ ಗ್ರಾಮದ ಹನುಮಂತ
ದೇವಾಲಯದ ಮುಂದಿನ ಶಾಸನ



ಕಪ್ಪಗಲ್ ಗ್ರಾಮದ ಬಾವಿಯ ಮೇಲಿನ ಶಾಸನ



ಕುರುಡಿ ಗ್ರಾಮದ ಈಶ್ವರ
ದೇವಾಲಯದ ಮುಂದಿರುವ ಶಾಸನ



ಮಾನ್ವಿ ತಾಲೂಕಿನ ಹನುಮಯ್ಯ ತಾತಾನ
ಗದ್ದುಗೆಗೆ ಹೊಗುವ ದಾರಿಯಲ್ಲಿರುವ ಬಾವಿಮೇಲಿನ ವೀರಗಲ್ಲು



ಕೊಟ್ನಕಲ್ ಗ್ರಾಮದ ತುರುಗೋಳ ವೀರಗಲ್ಲು



ಬಲ್ಲಟಗಿ ಶರಣಪ್ಪನ ಗದ್ದೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಶಾಸನ



ಕೊಟ್ನಕಲ್‌ನಲ್ಲಿರುವ ಪಾಳೆಗಾರರ ಕಾಲದ ವೀರಗಲ್ಲು



ಉಮಳಿ ಹೊಸೂರುನಲ್ಲಿರಿವ ಬೇಟೆಯಾಡುವ ವೀರಗಲ್ಲು



ಉಮಳಿ ಹೊಸೂಲಿನಲ್ಲಿರುವ ವೀರಗಲ್ಲುಗಳು



ಕೊಟ್ನಕಲ್ ವಿಜಯನಗರೊತ್ತರ ಕಾಲದ ಪಾಳೆಗಾರರ ವೀರಮಾಸ್ತಿಗಲ್ಲು



ಬಾಗಲವಾಡ ಬಡಿಗೆತನ ಮಾಡುವ ಸ್ಥಳದಲ್ಲಿರುವ ವೀರಗಲ್ಲು



ಬಾಗಲವಾಡ ಗ್ರಾಮದ ವೀರದಂಪತಿಗಳುಳ್ಳ ವೀರಗಲ್ಲು



ಕೊಟ್ನಕಲ್ಲ ವಿಜಯನಗರೋತ್ತರ ಪಾಳೆಗಾರರ ವೀರಗಲ್ಲು



ಹಣಗಿಯಲ್ಲಿರುವ ಉಡೆವು



ಮಾನ್ವಿ ತಾಲೂಕಿನಲ್ಲಿರುವ ಜೋಡನ ಬಾವಿ



ಮಾನ್ವಿ ತಾಲೂಕಿನ ಪ್ರಾವೇಶ ದ್ವಾರದಕೋಟೆ



ಮಾನ್ವಿ ತಾಲೂಕಿನ ಪೂರ್ವ ಭಾಗದ ಕೋಟೆ




ಮಲ್ಲಟ ಗ್ರಾಮದ ಮಲ್ಲಿಕಾರ್ಜುನ ದೇವಾಲಯ



ಕುರುಡಿ ಗ್ರಾಮದ ಈಶ್ವರ ದೇವಾಲಯ



ಮಲ್ಲಟದ ಮಿಲ್ಲಿಕಾಜುನ ದೇವಾಲಯದ ಮುಂದೆ ಇರುವ ಮೂರ್ತಿರಹಿತ
ಹೊಸ್ಸಳರ ಕಾಲದ ದೇವಾಲಯ



ಬಾಗಲವಾಡದ ರಾಮಲಿಂಗೇಶ್ವರ ದೇವಾಲಯ



ಕಲ್ಲೂರಿನ ಮಾರುಟೇಶ್ವರ ದೇವಾಲಯ ಹಿಂಭಾಗ

# ರಾಯಚೂರು ಜಿಲ್ಲೆ



ಕೃಷ್ಣಾ ನದಿ
ಗುಲ್ಬರ್ಗ ಜಿಲ್ಲೆ
ದೇವದುರ್ಗ
ಹಿರೇರಾಯಕುಂಪಿ
ಆಂಧ್ರ ಪ್ರದೇಶ
ಕೂಡ್ಲೂರು
ಜಾಲಹಳ್ಳಿ
ಚಂದನಕೇರಿ
ವೀರಗೋಟ
ಗುರುಗುಂಟ
ಜಲದುರ್ಗ
ಗಬ್ಬೂರು
ಅರಕೇರ
ಹಟ್ಟಿ
ಆನ್ವರಿ
ಕಲ್ಮಾಲ
ರಾಯಚೂರು
ಸಿರಿವಾರ
ಕಲ್ಲೂರು
ಮಲಿಯಾಬಾದ್
ಲಿಂಗಸೂಗೂರು
ಕರಡಿಕಲ್ಲು
ಕವಿತಾಳ
ಮಲ್ಲಟ
ಬಲ್ಲಟಗಿ
ಬಾಗಲವಾಡ
ಮಾನ್ವಿ
ಕುರುಡಿ
ಸುಂಕೇಶ್ವರ
ಇಡಪನೂರು
ಮುದಗಲ್
ಮಸ್ಕಿ
ಭೋಗಾವತಿ
ಬಳಗಾನೂರು
ತುಂಗಭದ್ರಾ ನದಿ
ಮಂತ್ರಾಲಯ ರಸ್ತೆ
ಮಸ್ಕಿ ಹಳ್ಳ
ದೇವರಗುಡಿ
ಸಿಂಧನೂರು
ಒಳಬಳ್ಳಾರಿ
ಬಳ್ಳಾರಿ ಜಿಲ್ಲೆ
ಜಾಲಿಹಾಳು
ರೌಡಗುಂದ
ಸಾಲಗುಂದ
ಬೇವಿನಹಳ್ಳಿ
ಮುಕುಂದ

